

ಕಾಯಕವೇ ಕೈಲಾಸ

# ಸಿದ್ಧಗಂಗಾ

ಗಣರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು



ಸಂಪುಟ : ೫೮ | ಜನವರಿ ೨೦೨೨ | ಸಂಚಿಕೆ : ೦೧




ಜನವರಿ ೨ ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಅಂಚೆ ಇಲಾಖೆ ನೌಕರರ ನಾನಾ ಸಂಘಗಳ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ೨೫ನೇ ಜಂಟಿ ವಲಯ ಸಮ್ಮೇಳನವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಅಂಚೆಯ ಇಲಾಖೆಯ ಸಿಪಿಎಂಜಿ ಶ್ರೀಮತಿ ಶಾರದಾ ಸಂಪತ್, ಎಫ್‌ಎನ್‌ಪಿಓ ಮಾಜಿ ಕಾರ್ಯದರ್ಶಿ ಶ್ರೀ ಡಿ. ತ್ಯಾಗರಾಜನ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



## ಸಂಕ್ರಾಂತಿ ಹಬ್ಬದ ಹಾರ್ದಿಕ ಶುಭಾಶಯಗಳು



ಉಡುಪಿಯ ಶ್ರೀಕೃಷ್ಣಮಠದಲ್ಲಿ ಪರ್ಯಾಯ ಶ್ರೀ ಅದಮಾರು ಮಠದ ಆಶ್ರಯದಲ್ಲಿ ನಡೆದ ಮಂಗಲೋತ್ಸವ ವಿಶ್ವಾರ್ಪಣಮ್-೨೦೨೧ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಾದ ನೀಡುತ್ತಿರುವುದು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಈಶಪ್ರಿಯ ತೀರ್ಥ ಮಹಾಸ್ವಾಮಿಗಳವರು ಹಾಗೂ ಗಣ್ಯರು ಉಪಸ್ಥಿತರಿದ್ದರು.



ತಮಿಳುನಾಡಿನ ವೆಲ್ಲೂರು ಜಿಲ್ಲೆಯ ಗುಡಿಯಾಟ್ಟಮ್‌ನ ಬೋಡಿಪೇಟೈನ "ವೀರಶೈವ ಲಿಂಗಾಯತ ಟ್ರಸ್ಟ್" ಏರ್ಪಡಿಸಿದ್ದ ಶ್ರೀ ಕಾಶೀವಿಶ್ವನಾಥ ದೇವಸ್ಥಾನದ ಪುನರ್ವಸತಿ ಅಷ್ಟಬಂಧನ ಮಹಾಕುಂಭಾಭಿಷೇಕ ಕಾರ್ಯಕ್ರಮದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಟ್ರಸ್ಟ್ ವತಿಯಿಂದ ಭಕ್ತಿಗೌರವ ಸಲ್ಲಿಸುತ್ತಿರುವುದು.



ಡಿಸೆಂಬರ್ ೨೦ ರಂದು ಸೋಲೂರು ಚಿಲುಮೆ ಮಠದಲ್ಲಿ ಏರ್ಪಡಿಸಿದ್ದ ಲಿಂ. ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರ ಸಂಸ್ಮರಣೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೮ ಜನವರಿ ೨೦೨೨ ಸಂಚಿಕೆ : ೦೧


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.
ಮೊ : ೯೧೪೧೦ ೩೬೩೪೫


## ಒಳಪುಟಗಳಲ್ಲಿ ..................




| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/- ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಜನವರಿ ತಿಂಗಳು ಶ್ರೀ ಸಿದ್ಧಗಂಗಾ ಮಠದ ಸೇವಾ ಕಾರ್ಯದಲ್ಲಿ ತಮ್ಮನ್ನು ಅರ್ಪಿಸಿಕೊಂಡು ಆಗಿ ಹೋದ ಮೂರು ಜನ ಪುಣ್ಯಪುರುಷರಾದ, ಮಹಾಶಿವಯೋಗಿಗಳಾದ ಪರಮಪೂಜ್ಯ ಶ್ರೀ ಅಟವೀ ಶಿವಯೋಗಿಗಳು, ಶ್ರೀ ಶ್ರೀ ಉದ್ದಾನ ಶಿವಯೋಗಿಗಳು ಹಾಗೂ ಶ್ರೀಮಠದ ಕೀರ್ತಿಯನ್ನು ವಿಶ್ವಮಟ್ಟದಲ್ಲಿ ಪಸರಿಸುವಂತೆ ಮಾಡಿದ ಮಹಾಮಾನವತಾವಾದಿ, ಆಧ್ಯಾತ್ಮದ ಮೇರುಶಿಖರ, ಕಾರುಣ್ಯಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಎಂದು ಹೇಳುವಾಗ ಧನ್ಯತಾಭಾವನೆವುಂಟಾಗುತ್ತದೆ, ಭಕ್ತಿಭಾವ ಸ್ಫುರಿಸುತ್ತದೆ.

ಪೂಜ್ಯ ಶ್ರೀ ಅಟವಿ ಶಿವಯೋಗಿಗಳು ದಾಸೋಹದ ಜ್ಯೋತಿಯನ್ನು ಹಚ್ಚಿದರೆ, ಪೂಜ್ಯ ಶ್ರೀ ಉದ್ಧಾನ ಶಿವಯೋಗಿಗಳು ಜ್ಞಾನಜ್ಯೋತಿಯ ಜೊತೆಗೆ ಸಾಮಾಜಿಕ ಕಾರ್ಯಗಳಿಗೆ ಅಸ್ತಿಭಾರ ಹಾಕಿದ ಮಹಾಪುರುಷರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಇವೆರಡನ್ನು ಸಮನ್ವಯಗೊಳಿಸಿ 'ನಭೂತೋ ನಭವಿಷ್ಯತಿ' ಎಂಬಂತೆ ವಿಸ್ತಾರಗೊಳಿಸಿದರು. ಬಸವಾದಿ ಶರಣರ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರೀಮಠದಲ್ಲಿ ಸಾಕಾರಗೊಳಿಸಿದರು. "ಇವನಾರವ ಇವನಾರವ ಎನ್ನದೆ' ಜಾತಿ, ವರ್ಗ ಬೇಧವಿಲ್ಲದೆ ಶಿಕ್ಷಣದಿಂದ ವಂಚಿತರಾಗುತ್ತಿದ್ದ ಲಕ್ಷಾಂತರ ದೀನ ದಲಿತ ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯವನ್ನು ಉಜ್ವಗೊಳಿಸಿದ ಮಹಾಶಿಲ್ಪಿಗಳು. ಮಕ್ಕಳಲ್ಲಿ ದೇವರನ್ನು ಕಂಡವರು. ಅವರ ಮುಖದಲ್ಲಿ ಮೂಡುವ ನಗುವನ್ನು ಕಂಡು ಸಂತೋಷಪಟ್ಟವರು.

ಒಂದು ಧಾರ್ಮಿಕ ಪೀಠದ ಮೇಲೆ ಸುಮಾರು ೮೯ ವರ್ಷಗಳ ಕಾಲ ಕುಳಿತು ಲೋಕಕಲ್ಯಾಣಕ್ಕಾಗಿ ತಮ್ಮ ಬದುಕನ್ನು ಶ್ರೀಗಂಧದ ಕೊರಡಿನಂತೆ ತೇದು ಕಷ್ಟಗಳನ್ನು ಸಹಿಸುತ್ತಾ ಸಮಾಜಕ್ಕೆ ಸಂತೋಷವನ್ನು ನೀಡಿದ ಮಹಾ ತ್ಯಾಗಿಗಳು, ಸಂಸ್ಕೃತವನ್ನು ಎಲ್ಲಾ ವರ್ಗದವರು ಕಲಿಯುವಂತೆ ಅವಕಾಶ ಕಲ್ಪಿಸಿಕೊಟ್ಟು ಹೃದಯ ವೈಶ್ಯಾಲತೆಯುಳ್ಳ ಮಹಾಮಾನವತಾವಾದಿಗಳು. ಪರಮಪೂಜ್ಯರ ಕೃಪಾಶೀರ್ವಾದ, ಮಾರ್ಗದರ್ಶನದಿಂದ ಲಕ್ಷಾಂತರ ಜನ ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಬೆಳಕು ಕಂಡು ಸ್ವಾಭಿಮಾನಿಗಳಾಗಿ, ಉತ್ತಮ ನಾಗರಿಕರಾಗಿ, ನೆಮ್ಮದಿ ಜೀವನ ನಡೆಸುತ್ತಿದ್ದಾರೆ. ಈ ಮೂರು ಜನ ಮಹಾಶಿವಯೋಗಿಗಳ ಪುಣ್ಯಸ್ಮರಣೆ ಮಾಡುವ ಅವಕಾಶ ದೊರಕಿರುವುದು ನಮ್ಮ ಪೂರ್ವಜನ್ಮದ ಸುಕೃತ. ಅವರನ್ನು ಸ್ಮರಿಸುವುದು ಬೆಳದಿಂಗಳ ರಾತ್ರಿಯಲ್ಲಿ ತಂಗಾಳಿ ಬೀಸಿದಂತ ಅನುಭವವಾಗುತ್ತದೆ.

ಕರ್ನಾಟಕ ಸರ್ಕಾರ ಪೂಜ್ಯರ ಲಿಂಗೈಕ್ಯ ದಿನವಾದ ಜನವರಿ ೨೧ ರಂದು ದಾಸೋಹ ದಿನವನ್ನಾಗಿ ಘೋಷಿಸಿ ಪೂಜ್ಯರಿಗೆ ಭಕ್ತಿ ಗೌರವವನ್ನರ್ಪಿಸಿರುವುದು ಅರ್ಥಪೂರ್ಣವಾಗಿದೆ. ಅಂದು ಭಕ್ತರು, ಅಭಿಮಾನಿಗಳು, ಮನೆ ಮನಗಳಲ್ಲಿ ದಾಸೋಹ ದಿನವನ್ನು ಶ್ರದ್ಧಾ ಭಕ್ತಿಯಿಂದ ಆಚರಿಸಿದರೆ ಪೂಜ್ಯರ ದಿವ್ಯಚರಣಗಳಿಗೆ ಭಕ್ತಿ ಪುಷ್ಪವನ್ನಾರ್ಪಿಸಿದಂತಾಗುತ್ತದ.

* * *

ಶತಶತಮಾನಗಳಿಂದ ಹಬ್ಬಗಳು ವ್ಯಕ್ತಿಯ ಬದುಕಿನಲ್ಲಿ ಅವಿಭಾಜ್ಯ ಅಂಗಗಳಾಗಿ ಬೆಳೆದು ಬಂದಿವೆ, ಉಳಿದು ಬಂದಿವೆ. ಬಹುತೇಕವಾಗಿ ಹಿಂದೂಗಳೆಲ್ಲರೂ ಆಚರಿಸುವ ವಿಶಿಷ್ಟ ಹಬ್ಬಗಳಲ್ಲಿ ಸಂಕ್ರಾಂತಿ ಹಬ್ಬವೂ ಒಂದು. ಇದನ್ನು 'ಉತ್ತರಾಯಣ ಪುಣ್ಯಕಾಲ', 'ದೇವಾಯನ ಕಾಲ' ಎಂದು ಕರೆಯುತ್ತಾರೆ. ಸಂಕ್ರಾಂತಿ ಎಂದರೆ ಉಜ್ವಲವಾದ ಬೆಳಕು, ಜೀವನದ ಹೊಸ ತಿರುವು ಎಂದರ್ಥ. ಸೂರ್ಯನು ಧನಸ್ಸು ಬಿಟ್ಟು ಮಕರ ರಾಶಿಯನ್ನು ಸೇರುವ ಪರ್ವಕಾಲ. ಸಂಕ್ರಾಂತಿ ಬಂದು ಸಾಂಪ್ರದಾಯದ ಹಬ್ಬವಾಗಿರದೆ ನಮ್ಮ ಸಂಸ್ಕೃತಿಯಲ್ಲಿ ಸ್ವರ್ಗ ನರಕಗಳ ಸಂಬಂಧವನ್ನು ಕಲ್ಪಿಸುವ, ಪ್ರೀತಿ, ವಿಶ್ವಾಸಗಳನ್ನು ಬೆಳೆಸುವ ಒಂದು ಪವಿತ್ರ ಕಲ್ಪನೆಯುಳ್ಳ ಹಬ್ಬವಾಗಿದೆ. ನಮ್ಮ ಹೃದಯ ಮಂದಿರದಲ್ಲಿ ಕತ್ತಲನ್ನು ಓಡಿಸಿ ಜ್ಞಾನಜ್ಯೋತಿಯಾಗಿ ಹಚ್ಚಿ ಬದುಕನ್ನು ಹಸನು ಮಾಡಿಕೊಳ್ಳುವ ದಿವ್ಯಸಂದೇಶವನ್ನು ಸಂಕ್ರಾಂತಿ ನೀಡುತ್ತದೆ.

* * *

ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಆಗಸ್ಟ್ ೧೫ ಒಂದು ದೃಷ್ಟಿಯಿಂದ ಮಹತ್ವದ ದಿನವಾದರೆ ಇನ್ನೊಂದು ದೃಷ್ಟಿಯಿಂದ ಜನವರಿ ೨೬ ಸ್ಮರಣೀಯವಾದ ದಿನವಾಗಿದೆ. ಒಂದು ನಾವು ಸ್ವಾತಂತ್ರ್ಯವನ್ನು ಪಡೆದ ದಿನ ಮತ್ತೊಂದು ಆ ಸ್ವಾತಂತ್ರ್ಯವನ್ನು ರೂಢಿಸಿಕೊಳ್ಳುವುದಕ್ಕಾಗಿ ನಮ್ಮದೇ ಆದ ರಾಜ್ಯಾಂಗವನ್ನು ರೂಪಿಸಿಕೊಂಡು ಅದರಡಿಯಲ್ಲಿ ವಿಫುಲವಾದ ವೈವಿಧ್ಯಗಳಿಂದ ಕೂಡಿದ ಈ ಬೃಹತ್ ರಾಷ್ಟ್ರವನ್ನು ಒಂದು ಗಣರಾಜ್ಯವನ್ನಾಗಿ ಪೋಷಿಸಿಕೊಂಡ ದಿನ. ಏಳು ದಶಕಗಳಿಗಿಂತಲೂ ಹೆಚ್ಚು ಕಾಲ ಈ ಗಣರಾಜ್ಯ ಪ್ರಜಾಪ್ರಭುತ್ವದ ಮಾರ್ಗದಲ್ಲಿ ನಡೆದುಬಂದಿದೆ.

ಪೂಜ್ಯ ಉಭಯ ಶ್ರೀ ಶ್ರೀಗಳವರ ಕೃಪಾಶೀರ್ವಾದ ಹಾಗೂ ಮಾರ್ಗದರ್ಶನದಿಂದ 'ಸಿದ್ಧಗಂಗಾ' ಮಾಸಪತ್ರಿಕೆ ಐವತ್ತೆಂಟನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ಲೇಖಕ ಬಂಧುಗಳಿಗೆ, ಚಂದಾದಾರರಿಗೆ, ಜಾಹಿರಾತುದಾರರಿಗೆ, ಓದುಗರಿಗೆ 'ಸಿದ್ಧಗಂಗಾ' ಸಂಕ್ರಾಂತಿ ಹಬ್ಬ ಹಾಗೂ ಗಣರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳನ್ನು ಕೋರುತ್ತದೆ

ಪ್ರೊ. ಹೆಚ್.ವಿ. ವೀರಭದ್ರಯ್ಯ





# ಶ್ರೀವಾಣಿ



ಜೀವನದಲ್ಲಿ ಯಶಸ್ಸನ್ನು ಗಳಿಸಬೇಕಾದರೆ, ಎರಡು ಮುಖ್ಯವಾದ ವಿಷಯಗಳನ್ನು ಅವಶ್ಯವಾಗಿ ಗಮನಿಸಬೇಕು. ಒಂದು ಸಂಕಲ್ಪ ಮಾಡುವುದು. ಎರಡು ಆ ಗುರಿ ಮುಟ್ಟುವ ಪ್ರಯತ್ನ ಮಾಡಬೇಕು, ಇದು ಸಣ್ಣಕಾರ್ಯದಿಂದ ಹಿಡಿದು ದೊಡ್ಡ ಕಾರ್ಯದವರೆಗೂ ಅನ್ವಯವಾಗುವಂತಹ ಮಾತು. ಯಾವುದೇ ಕ್ಷೇತ್ರವಾಗಲೀ ಯಾವುದೇ ವ್ಯಕ್ತಿಯಾಗಲೀ ಅವನು ಜಯಗಳಿಸಬೇಕು ಅನ್ನುವ ಸ್ಥಿರ ಮನಸ್ಸುಗಳುಳ್ಳವನಾದರೆ ಮೊದಲು ಸಂಕಲ್ಪ ಮಾಡಬೇಕು. ವಿದ್ಯಾರ್ಥಿ ಏನು ಸಂಕಲ್ಪ ಮಾಡಬೇಕು, ನಾನು ಜ್ಞಾನಾರ್ಜನೆ ಮಾಡಬೇಕು, ನಾನು ವಿದ್ಯಾವಂತನಾಗಬೇಕು, ಒಳ್ಳೆಯ ಪ್ರಜೆ ಆಗಬೇಕು ಅನ್ನುವ ಸಂಕಲ್ಪ ಮಾಡಬೇಕು. ನಿಮ್ಮ ಗುರಿ ಒಳ್ಳೆಯ ಪ್ರಜೆ ಆಗುವಂತಹುದು. ಆ ಪ್ರಕಾರವಾಗಿ ಪ್ರತಿ ವ್ಯಕ್ತಿಯೂ ಕೂಡ ತನ್ನ ಭವಿಷ್ಯದ ಬಗ್ಗೆ ಚಿಂತನೆ ಮಾಡುವಂತಹವನಾಗಿ ಸಂಕಲ್ಪ ಮಾಡಬೇಕು. ಮೊದಲು ಮಹಾಸಂಕಲ್ಪ, ಸತ್‌ಸಂಕಲ್ಪವಾಗಬೇಕು. ಅದು ದುಃಸಂಕಲ್ಪವಾಗಬಾರದು. ಸಂಕಲ್ಪ ಮಾಡಿದ ಮೇಲೆ ಎರಡನೇ ಹಂತ ಅಂದರೆ, ಆ ಸಂಕಲ್ಪವನ್ನು ಪೂರೈಕೆ ಮಾಡಲು ನಿರಂತರವಾಗಿ ಪ್ರಯತ್ನಶೀಲನಾಗಬೇಕು. ಸಂಕಲ್ಪ ಮಾಡಿದಾಕ್ಷಣಕ್ಕೆ ಸಿದ್ಧಿಯಾಗುತ್ತೆ ಅನ್ನುವ ಮಾತಲ್ಲ. ಮನುಷ್ಯನಿಗೆ ನಿರಂತರವಾದ ಪ್ರಯತ್ನಬೇಕು. ಸ್ಥಿರವಾದಂತಹ ಪ್ರಯತ್ನ ಬೇಕು. ಯಾವುದೇ ಗುರಿ ಮುಟ್ಟಬೇಕಾದರೆ ನಾವು ಅನುಸರಿಸಬೇಕಾದ ಮಾರ್ಗದಲ್ಲಿ ಹಲವಾರು ಅಡ್ಡಿ ಆತಂಕ ಉಂಟಾಗುತ್ತದೆ, ಅಡಚಣೆ ಉಂಟಾಗುತ್ತದೆ. ಅದು ಸ್ವಾಭಾವಿಕವಾದಂತಹದ್ದು. ಆದರೆ ಯಾರು ಮಹಾಸಂಕಲ್ಪ ಮಾಡಿ, ಸಂಕಲ್ಪ ಮುಟ್ಟುವಂತಹ ಸ್ಥಿರಮನಸ್ಸು ಮಾಡುತ್ತಾನೋ ಅವನಿಗೆ ಮಧ್ಯಂತರದಲ್ಲಿ ಬರುವಂತಹ ಅಡ್ಡಿ ಆತಂಕಗಳು ಧೈರ್ಯಗೆಡಿಸುವುದಿಲ್ಲ, ವಿಚಲಿತನಾಗುವುದಿಲ್ಲ. ಅವನು ಸಂಕಲ್ಪವನ್ನು ಬಿಡುವುದಿಲ್ಲ. ಎಷ್ಟೇ ಅಡ್ಡಿ ಆತಂಕವುಂಟಾಗಲೀ, ಕಷ್ಟಕಾರ್ಪಣ್ಯಬರಲಿ, ತೊಂದರೆ ತಾಪತ್ರಯ ಬರಲಿ ಎಲ್ಲವನ್ನೂ ಸಹಿಸಿಕೊಂಡು, ಸಮಾಧಾನ ಮನಸ್ಕನಾಗಿ ಪ್ರಯತ್ನದಲ್ಲಿ ಮುಂದುವರಿಯುತ್ತಾನೆ. ಇದೇನೆ ಸಾಮಾನ್ಯರಿಗೂ, ಅವನಿಗೂ ಇರುವಂತಹ ವ್ಯತ್ಯಾಸ.

ಮಹಾಸಂಕಲ್ಪ ಮಾಡಿದವನು ಮಾಡಿಯೇ ಮಾಡುತ್ತಾನೆ. ಆದರೆ ಸಂಕಲ್ಪ ಮುಟ್ಟುವಂತಹ ಮಾರ್ಗದಲ್ಲಿ ಬಹಳ ಮಂದಿ ಅಪಜಯವನ್ನು ಮುಟ್ಟುತ್ತಾರೆ. ಮಾನಸಿಕವಾದ ದೌರ್ಬಲ್ಯ, ಶಾರೀರಿಕವಾದ ದೌರ್ಬಲ್ಯ, ಪರಿಸರ ದೌರ್ಬಲ್ಯ ಹೀಗಾಗಿ ಹಲವಾರು ದೌರ್ಬಲ್ಯಗಳಿಂದ ಅವನು ಮಧ್ಯದಲ್ಲಿಯೇ ಕರ್ತವ್ಯದಿಂದ ದೂರವಾಗುತ್ತಾನೆ. ಪ್ರಜ್ಞೆ ಇದ್ದರೂ ಕೂಡ ಪಡೆದುಕೊಳ್ಳಲಾರ ಅವನು. ಅಂತೆಯೇ ವಿದ್ಯಾರ್ಥಿಗಳು ಮಹಾಸಂಕಲ್ಪ ಮಾಡಬೇಕು. ಒಳ್ಳೆಯ ಪ್ರಜೆ ಆಗಬೇಕಾದರೆ ಒಳ್ಳೆಯ ವಿದ್ಯಾವಂತನಾಗಬೇಕು. ಒಳ್ಳೆಯ ಚಾರಿತ್ರ್ಯವುಳ್ಳವನಾಗಬೇಕು. ಈ ಪ್ರಕಾರವಾಗಿರುವಂತಹ ಗುರಿಯನ್ನು ಮುಟ್ಟುವಲ್ಲಿ ಯಾವತ್ತೂ ದೃಢಸಂಕಲ್ಪ ಮಾಡಬೇಕು.

೦೫-೦೭-೧೯೮೯

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಇಷ್ಟಲಿಂಗವ ತೋರಿ**
**ನಾವು ನಿಷ್ಠೆ ವಾನರು, ನಾವು ಲಿಂಗಾಂಗಿಗಳೆಂದು**
**ಹೊಟ್ಟೆಯನು ತುಂಬಿಕೊಳಬಹುದಲ್ಲದೆ**
**ಸರ್ವಾಂಗವನು ಲಿಂಗನಿಷ್ಠೆಯಲ್ಲಿ ಘಟ್ಟಿಗೊಳಿಸಬಾರದು ಕಾಣಿರಣ್ಣಾ**
**ಹೊಟ್ಟೆಯಾರ್ಥವುಳ್ಳವಂಗೆ ನಿಷ್ಠೆಯೆಲ್ಲಿಯದೊ**
**ನಿಷ್ಠೆಹೀನರಿಗೆ ನೀವು ಕನಸಿನೊಳಗೆ ಇಲ್ಲ ನೋಡಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಇಷ್ಟಲಿಂಗವ ತೋರಿ-ಮಾಡುವಂಥ ಇಷ್ಟಲಿಂಗ ಪೂಜೆಯನು ಕಾಣಿಸಿ, ನಾವು ನಿಷ್ಠೆವಾನರು – ಏಕಲಿಂಗ ನೈಷ್ಠಿಕಾಪರತ್ವ ಉಳ್ಳವರು ; ನಾವು ಲಿಂಗಾಂಗಿಗಳೆಂದು – ಅಂಗದಲ್ಲಿ ಲಿಂಗ ಸಂಬಂಧವ ಮಾಡಿಕೊಂಡು ಲಿಂಗಪೂಜೆಯ ಮಾಡಲ್ಪಟ್ಟಂಥವರುಗಳೆಂದು, ಹೊಟ್ಟೆಯ ತುಂಬಿಕೊಳಬಹುದಲ್ಲದೆ, ಘಟರಕ್ಷಣ್ಯವ ಮಾಡಿಕೊಳಬಹುದಲ್ಲದೆ, ಸರ್ವಾಂಗವನು – ಸ್ಥೂಲಾಂಗವನು, ಲಿಂಗನಿಷ್ಠೆಯಲ್ಲಿ – ಏಕಲಿಂಗನಿಷ್ಠೆಯಲ್ಲಿ, ಘಟ್ಟಿಗೊಳಿಸಬಾರದು-ಸ್ಥಿರಗೊಳಿಸಬಾರದು, ಕಾಣಿರಣ್ಣಾ – ಕಂಡಿರಣ್ಣಾ; ಹೊಟ್ಟೆಯಾರ್ಥವುಳ್ಳವಂಗೆ – ದೇಹದ ಘಟರಕ್ಷಣ್ಯವುಳ್ಳವಂಗೆ, ನಿಷ್ಠೆ ಎಲ್ಲಿಯದೊ-ಏಕಲಿಂಗ ನೈಷ್ಠಿಕಾಪರತ್ವ ಎಲ್ಲಿಯದೊ, ಇಲ್ಲವು; ನಿಷ್ಠೆ ಹೀನರಿಗೆ-ಏಕಲಿಂಗ ನೈಷ್ಠಿಕಾ ಪರತ್ವವಿಲ್ಲದವರಿಗೆ, ನೀವು-ಪರಶಿವಲಿಂಗವು, ಕನಸಿನೊಳಗೆ ಇಲ್ಲ ನೋಡಾ-ಜಾಗ್ರದಲಂತು ಇಲ್ಲ, ಸ್ವಪ್ನದಲ್ಲಿ ಮೊದಲೇ ಉಂಟಾಗಿಲ್ಲವು ಕಂಡಾ. ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು-ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)**

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಚಾರವೆಂಬುದು ಆಡಂಬರವಿರದಿರಲಿ
ಅಂತರಂಗದ ರತ್ನವಾಗಿರಲಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣ ಸಂಸಾರದ ಶಿವಯೋಗಾವಾಗಿಸಿದ
ಮರ್ತ್ಯದ ಮಣಿಹಕೆ ಬೆಳಕಾದ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಪೂಜೆಗೆ ಹೆಣ್ಣೇನು ಗಂಡೇನು
ಲಿಂಗಭೇದವೇಕೆ ತಿಳಿನೀನು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಡುವನು ನಾನೆಂಬ ಮಾಡುವನು ನಾನೆಂಬ
ನಾಡಾಡಿ ಮಾತು ಬರದಿರಲಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೀಪದ ಕುಡಿಯಂತೆ ಮನವು ಚಂಚಲವಯ್ಯ
ತಾಪ ಪಡುತಿಹುದು ಒಳಗೊಳಗೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈಬಾಯಿ ಕಚ್ಚೆ ಶುದ್ಧವಿರಲಿ ಎಂದೆ
ಕಂಗಳಲಿ ಕಾಮ ಬರದಿರಲಿ । ತಿಳಿಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿತ್ತ ಚಿನ್ನವ ಮಾಡು ಸತ್ಯದೊಡನೆ ನಡೆಸು
ಉತ್ತಮ ವ್ಯಾಯಾಮದೊಳಗೂಡು । ತಿಳಿಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಬಂಜೆಯ ಹೃದಯ ನೀರಿಲ್ಲದ ಬಾವಿ ತಾ
ದಯವಿಲ್ಲದ ಬಂಧುತಾ ಬರಿ ಶಿಲೆಯು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರ್ತವ್ಯ ಪ್ರಾರ್ಥನೆಯ ಸತ್ಯಸಂತಾನವು
ಮರ್ತ್ಯರಿಗೆ ಮಂತ್ರವು ನಿಜದರಿವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನೆಗೆ ಬಾಗಿಲ ತೆರದಿ ಮನಕೆ ಬಾಗಿಲವಿರಲಿ
ಬೆಳಕು ಗಾಳಿಗೆ ಸದಾ ತೆರೆದಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ಭಕ್ತಿನಮನ

# ಸಿದ್ಧಗಂಗೆಯ ಕೀರ್ತಿ ಕಲಶ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು

– ಎಚ್.ಎಸ್. ಸಿದ್ಧಗಂಗಪ್ಪ *



ಸಿದ್ಧಗಂಗೆಯೆಂದರೆ ಶರಣರು, ಸಂತರು, ದಾರ್ಶನಿಕರು ಶಿವಯೋಗಾನುಷ್ಠಾನ ಮಾಡಿದ ಪುಣ್ಯಭೂಮಿ. ಸಿದ್ಧಗಂಗೆಯೆಂದರೆ ಗಂಗಾ ಮಾತೆ ನೆಲಸಿದ ಆವಾಸಸ್ಥಾನ, ಶ್ರೀ ಸಿದ್ಧಲಿಂಗೇಶ್ವರರು ತಪೋನುಷ್ಠಾನ ಮಾಡಿ ಪವಾಡ ಮರೆದ ಪುಣ್ಯಕ್ಷೇತ್ರ. ಸಿದ್ಧಗಂಗೆಯೆಂದರೆ ತ್ಯಾಗ, ಸೇವೆ, ಕರುಣೆ, ದಯೆ, ವಾತ್ಸಲ್ಯ, ಪ್ರೀತಿ, ಮಾನವೀಯ ಮೌಲ್ಯಗಳು ಸಾಕಾರಗೊಳ್ಳುತ್ತಿರುವ ಸೇವಾಕ್ಷೇತ್ರ. ಸರ್ವಧರ್ಮ ಸಮನ್ವಯದ ಸುಕ್ಷೇತ್ರ, ಬಡವರು, ದೀನ ದಲಿತ ವಿದ್ಯಾರ್ಥಿಗಳ ಭವಿಷ್ಯ ರೂಪಿಸುವ ಕಮ್ಮಟ, ಬಸವಣ್ಣನವರು ರೂಪಿಸಿದ ದಾಸೋಹದ ಮಹಾಮನೆ, ತ್ರಿವಿಧ ದಾಸೋಹದ ಮಹಾಸಂಗಮ. ನೊಂದವರಿಗೆ ಶಾಂತಿ, ನೆಮ್ಮದಿ ನೀಡುವ ತಾಣ. ನಡೆದಾಡುವ ದೇವರು ನಿತ್ಯ ದರ್ಶನ ನೀಡುತ್ತಿದ್ದ ಪುಣ್ಯಕ್ಷೇತ್ರ. ಬಸವಾದಿ ಶರಣರು ಬಿತ್ತಿದ ಆದರ್ಶ ಮೌಲ್ಯಗಳನ್ನು ಬಿತ್ತಿ ಬೆಳೆಯುತ್ತಿರುವ ಕರ್ಮಭೂಮಿ. ರೈತರ ಬಗ್ಗೆ ಕಾಳಜಿ, ಅತಿಥಿ ಸತ್ಕಾರದ ಮಹಾಮನೆ, ಸಿದ್ಧಗಂಗೆಯೆಂದರೆ ಎಲ್ಲಿಂಯೋ ಅನಾಥವಾಗಿ ಬಿದ್ದ ಕಲ್ಲುಗಳನ್ನು ಕಡೆದು ಸುಂದರಮೂರ್ತಿಗಳನ್ನಾಗಿ ಮಾಡಿ ಲೋಕಪೂಜ್ಯವಾಗುವಂತೆ ಮಾಡುವ ಶಿಲ್ಪಕಲಾ ಕೇಂದ್ರ.

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಭಕ್ತಿಯ ಭಸ್ಮ ಲೇಪಿಸಿದವರು ಪೂಜ್ಯ ಶ್ರೀ ಅಟವೀ ಸ್ವಾಮಿಗಳಾದರೆ, ಸಿದ್ಧಿಯ ಪುಷ್ಪ ಮುಡಿಸಿದವರು ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು. ಶ್ರೀಕ್ಷೇತ್ರಕ್ಕೆ ಕೀರ್ತಿಯ ಕಿರೀಟ ತೊಡಿಸಿದವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಕಾಲದ ಒರೆಗಲ್ಲಿನ ಮೇಲೆ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಸದೃಢವಾಗಿ ನಿಲ್ಲಿಸಿದ, ಸಂಕಲ್ಪ ಸಿದ್ಧಿ ಪೂಜ್ಯ ಶ್ರೀಗಳವರದು. ಸಿದ್ಧಗಂಗಾ ಕ್ಷೇತ್ರ ಈಗ ಭಕ್ತಿ, ಜ್ಞಾನ ಮತ್ತು ಅನ್ನದಾಸೋಹದ ವಿಶ್ವ ಪ್ರಸಿದ್ಧ ಮಹಾಮನೆ. ಶ್ರೀಮಠಕ್ಕೆ ಇಂದು ಇರುವ ಸ್ಥಾನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಇಷ್ಟಲಿಂಗ ಪೂಜೆಯ ಫಲ.

ಯಾರಾದರೂ 'ಸೇವೆ ಎಂದರೆ ಏನು' ಎಂದು ಪ್ರಶ್ನೆ ಮಾಡಿದರೆ ನಾವು ಕೊಡುವ ಒಂದೇ ಉತ್ತರವೆಂದರೆ 'ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಆನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ನಡೆಯುತ್ತಿರುವುದು', ಹಾಗೆಯೇ 'ಗುರುಗಳು' ಎಂದರೆ ಯಾರು ಎಂದು ಕೇಳಿದರೆ 'ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು' ಎಂದು ತಕ್ಷಣವೇ ಉತ್ತರಿಸಬಹುದೆಂದು ಕಾಣುತ್ತದೆ. 'ಸೇವೆ'ಯ ನಿಜವಾದ ಸಾಕ್ಷಾತ್ ದರ್ಶನವಾಗಬೇಕಾದರೆ ಒಮ್ಮೆ ಶ್ರೀ ಕ್ಷೇತ್ರದಲ್ಲಿ ಪ್ರತಿನಿತ್ಯ ನಡೆಯುವ ಕಾರ್ಯ ಚಟುವಟಿಕೆಗಳನ್ನು ನೋಡಬೇಕು.

ನಾಡಿನ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಮಠದ ಕೀರ್ತಿಯನ್ನು ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟಕ್ಕೇರಿಸಿದ ಹಿರಿಮೆ, ಕೀರ್ತಿ, ತ್ರಿವಿಧ' ದಾಸೋಹಮೂರ್ತಿ, ನಡೆದಾಡುವ ದೇವರೆಂದೇ ಜನಮಾನಸದಲ್ಲಿ ಪೂಜ್ಯ ಸ್ಥಾನವನ್ನು ಪಡೆದಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಂದು ಹೇಳುವಾಗ ಧನ್ಯತೆ ಹಾಗೂ ಭಕ್ತಿಭಾವ ಮೂಡುತ್ತದೆ. ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಒಂದು ಧಾರ್ಮಿಕ ಪೀಠದ ಮೇಲೆ ೮೯ ವರ್ಷಗಳ ಸುದೀರ್ಘ ಕಾಲ ಕುಳಿತು ಲೋಕ ಕಲ್ಯಾಣಕ್ಕಾಗಿ ಸಮಾಜಮುಖಿ ಸೇವೆಗಾಗಿ ತಮ್ಮನ್ನು ಅರ್ಪಣಾಭಾವದಿಂದ ಸಮರ್ಪಿಸಿಕೊಂಡವರು ಪೂಜ್ಯ ಶ್ರೀಗಳವರು. ಪರಮಪೂಜ್ಯರ ಕತೃತ್ವಶಕ್ತಿ, ದೂರದೃಷ್ಟಿ, ಕ್ರಿಯಾಶೀಲತೆ, ಜೀವಕಾರುಣ್ಯ, ದೀನ-ದಲಿತರ ಮೇಲಿನ ಕಾಳಜಿ, ಪ್ರೀತಿ, ಅನುಪಮವಾದುದು. ಶಿಕ್ಷಣದಿಂದ ವಂಚಿತರಾಗುತ್ತಿರುವ ಗ್ರಾಮೀಣ ಪ್ರದೇಶದ ಬಡ ಮಕ್ಕಳಿಗೆ ಅಕ್ಷರ ಜ್ಞಾನದ ಜೊತೆಗೆ ನೈತಿಕ ಶಿಕ್ಷಣವನ್ನು ನೀಡಿ ವಿಶ್ವದ್ಯಾದಂತ ನಮ್ಮ ಸಂಸ್ಕೃತಿಯ ಜ್ಯೋತಿಯಾಗಿ ಬೆಳಗುವಂತೆ ಮಾಡಿದ ಮಹಾಮಾನವತಾವಾದಿ, ಅವರದು ಸದ್ದುಗದ್ದಲವಿಲ್ಲದ ನಿರಂತರ ಪ್ರೀತಿಯ ಅನನ್ಯ ಸೇವೆಗೆ ಸರಿಸಾಟಿಯಿಲ್ಲ.

ಜಗಜ್ಯೋತಿ, ಸಮಾನತೆಯ ಹರಿಕಾರ, ತುಳಿತ ಕೊಳ್ಳಗಾದವರನ್ನು ಮೇಲೆತ್ತಿ, ಅವರಲ್ಲಿ ಸ್ವಾಭಿಮಾನದ ಬೀಜವನ್ನು ಬಿತ್ತಿ ಬದುಕನ್ನು ಕಟ್ಟಿಕೊಳ್ಳುವಂತೆ ಮಾಡಿದ ಬಸವಣ್ಣನವರ ಆದರ್ಶ, ಸಿದ್ಧಾಂತಗಳನ್ನು, ಮಾನವೀಯ ಮೌಲ್ಯಗಳನ್ನು ಶ್ರೀಮಠದಲ್ಲಿ ಸಾಕಾರಗೊಳಿಸಿದ ಪರಮಪೂಜ್ಯರು ೧೨ನೇ ಶತಮಾನದಲ್ಲಿ ನಡೆದ ಸಾಮಾಜಿಕ ಹಾಗೂ ಧಾರ್ಮಿಕ ಪರಿವರ್ತನೆ, ದಾಸೋಹ ವೈಭವವನ್ನು ಮತ್ತೆ ನೋಡುವ ಭಾಗ್ಯವನ್ನು ನಮಗೆಲ್ಲ ಕರುಣಿಸಿದ್ದರು. ಸರ್ವಧರ್ಮಕ್ಕೆ ಜೀವಂತ ಸಾಕ್ಷಿಯಾಗಿರುವ ಶ್ರೀ ಸಿದ್ಧಗಂಗಾ ಪುಣ್ಯಭೂಮಿಯಲ್ಲಿ ಜಾತಿ, ವರ್ಗಭೇದವಿಲ್ಲದೆ ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಿದ ಶಿಕ್ಷಣ ಪ್ರೇಮಿಗಳು. ಆ ಭವ್ಯಪರಂಪರೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮುಂದುವರಿಸಿಕೊಂಡು ಬರುತ್ತಿದ್ದಾರೆ.

ಮಾನವೀಯ ಸಂಬಂಧಗಳು ನುಚ್ಚುನೂರ ಆಗುತ್ತಿರುವ ಇಂದಿನ ವಿಷಾದನೀಯ ಸನ್ನಿವೇಶದಲ್ಲಿ ಮಾನವೀಯ ಸೇವೆಯೇ ಮಹಾದೇವನ ಪೂಜೆಯೆಂದು ಭಾವಿಸಿದ್ಧ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಠಾಧಿಪತಿಗಳಿಗೆ ಆದರ್ಶವಾಗಿದ್ದರು, ಸ್ಫೂರ್ತಿಯಾಗಿದ್ದರು.

ಈ ಸಂದರ್ಭದಲ್ಲಿ ಹನ್ನೆರಡನೆ ಶತಮಾನದಲ್ಲಿ ಬಾಳಿ ಬೆಳಗಿದ ಶರಣ ಉರಿಲಿಂಗದೇವನ ವಚನವನ್ನು ಉಲ್ಲೇಖಿಸುವುದು ಉಚಿತವೆನಿಸುತ್ತದೆ.

**ಲೋಕದಂತೆ ಬಾರರು, ಲೋಕದಂತೆ ಇರರು,**
**ಲೋಕದಂತೆ ಹೋಗರು, ನೋಡಯ್ಯ,**
**ಪುಣ್ಯದಂತೆ ಬಪ್ಪರು, ಜ್ಞಾನದಂತೆ ಇಪ್ಪರು,**
**ಮುಕ್ತಿಯಂತೆ ಹೋಹರು ನೋಡಯ್ಯ,**
**ಉರಿಲಿಂಗದೇವಾ, ನಿಮ್ಮ ಶರಣರು**
**ಉಪಮಾತೀತರಾಗಿ ಉಪಮಿಸಬಾರದು.**

ಶಿವಯೋಗಿ ಉರಿಲಿಂಗಿದೇವನ ಈ ವಚನ ದೊಡ್ಡವರು, ಪುಣ್ಯಪುರುಷರ ಜೀವನ ಸಿದ್ಧಿಗಳನ್ನು ಕುರಿತು ಬರೆಯಬೇಕೆನ್ನುವವರಿಗೆ ಎಚ್ಚರಿಕೆಯ ಹೆಜ್ಜೆಗಳನ್ನಿಡುವಂತಿದೆ. ಮಹಾತ್ಮರ, ದಾರ್ಶನಿಕರ, ಸಾಧನೆ, ಸಿದ್ಧಿಗಳನ್ನು ಅಭಿವ್ಯಕ್ತಿಗೊಳಿಸಲು ಮಾತಿಗೆ ನಿಲಕದ್ದು, ಅವರದು ಲೋಕ ಜೀವನಕ್ಕಿಂತ ವಿಭಿನ್ನವಾದ ರೀತಿ, ಅವರ ಬದುಕು ನಿಸ್ವಾರ್ಥದಿಂದ ಕೂಡಿದ್ದು, ಸಮಾಜದ ಸಮಷ್ಟಿಯ ಹಿತಸಾಧನೆಗಾಗಿ ಸಮರ್ಪಣೆಗೊಂಡಿದ್ದು, ಲೋಕಹಿತ ಚಿಂತನೆ, ಸತ್ಕ್ರಿಯೆಗಳ ಸಾಮರಸ್ಯದಿಂದ ಕೂಡಿದ ಬದುಕು ಅವರದು. ಅವರು ಜ್ಞಾನದ, ಮೋಕ್ಷದ, ಪುಣ್ಯದ ಪ್ರತೀಕ.

ಸಿರಿಗೆರೆಯ ಪರಮಪೂಜ್ಯ ಶ್ರೀ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳವರು ಪೂಜ್ಯ ಶ್ರೀ ಶ್ರೀಗಳವರನ್ನು ಕುರಿತು ತಮ್ಮ ನುಡಿನಮನದಲ್ಲಿ "ಸಿದ್ಧಗಂಗಾ ಶ್ರೀಗಳಂತೆ ಜನರಲ್ಲಿ ಕಾಲ, ಕಾಯಕದ ಪ್ರಜ್ಞೆ ಜಾಗೃತವಾದಲ್ಲಿ ನಾಡು







ಅದ್ಭುತ ಪ್ರಗತಿ ಸಾಧಿಸಲು ಸಾಧ್ಯ. ಇಂಥ ಜೀವನಕ್ಕೆ ನಿಜವಾದ ಭಕ್ತಿ, ಗೌರವ ಸಲ್ಲಿಸುವುದೆಂದರೆ ಅವರ ಪಾದಪೂಜೆ ಮಾಡಿ ಕಾಣಿಕೆ ಸಲ್ಲಿಸಿ, ದೀರ್ಘದಂಡ ನಮಸ್ಕಾರ ಹಾಕುವುದಲ್ಲ. ಬದಲಾಗಿ ಅವರ ಆದರ್ಶಗಳನ್ನು ಮೈಗೂಡಿಸಿಕೊಂಡು ಸಮಾಜಮುಖಿ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡು ಆಂತರಿಕ ನೋಟವನ್ನು ಹೆಚ್ಚಿಸಿಕೊಳ್ಳುವುದು. ಇಂದು ಅವರಂತ ಸಂನ್ಯಾಸಿಗಳು ಸಮಾಜಕ್ಕೆ ಬೇಕಾಗಿದ್ದಾರೆ." ಪೂಜ್ಯರ ಈ ನುಡಿನಮನಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಘನಶಿವ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ.

ಕರ್ಮಯೋಗಿ ಸಿದ್ಧರಾಮ ಒಂದು ವಚನದಲ್ಲಿ ನಿಜವಾದ ಗುರು ಹೇಗಿರಬೇಕು ಎಂಬುದನ್ನು ಅರ್ಥಪೂರ್ಣವಾಗಿ ಮನಮುಟ್ಟುವಂತೆ ಹೇಳಿದ್ದಾರೆ.

**ಲೋಕದಲ್ಲಿಹ ನೂರಾರು ಗುರುಗಳ ನೋಡಿ ನೋಡಿ**
**ನಾನು ಬೇಸರಗೊಂಡೆನಯ್ಯಾ**
**ವಿತ್ತಾಪಹಾರಿ ಗುರುಗಳು ನೂರಾರು**
**ಮಂತ್ರ ತಂತ್ರದಿಂದುಭಯ ಲೋಕದಲ್ಲಿ**
**ಸುಖ ದುಃಖವೀವ ಗುರುಗಳು ನೂರಾರು**
**ಸತ್ಯಮೋ(ರ್)ಪದೇಶವನರುಹಿ**
**ಸ್ವರ್ಗ ಮರ್ತ್ಯದಲ್ಲಿ ಸುಖವೀವ ಗುರುಗಳು ನೂರಾರು**
**ವಿಚಾರ ಮುಖದಿಂದ ಷಟ್ಸಾಧನೆಯನರುಹುವ**
**ಗುರುಗಳು ನೂರಾರು ವಿಷಯಗಳೆಲ್ಲ**
**ಮಿಥ್ಯಂಗಳೆಂದರುಹಿ ಆತ್ಮಾನುರಾಗತ್ವವನೀವ**
**ಗುರುಗಳು ನೂರಾರು ಶಿವಜೀವರ ಏಕತ್ವವನರುಹಿ**
**ನಿರ್ಮಲಜ್ಞಾನವೀವ ಗುರುಗಳು ಪ್ರಮಥರು,**
**ಸಂಶಯಾಳಿಗಳನೆಲ್ಲ ಜ್ಞಾನಾಗ್ನಿಯಿಂದ ದಹಿಸಿ**
**ಮುಕ್ತಿಯ ಹಂಗೆಂಬುದ ಅರುಹಿನ ಬಂಧನದಲ್ಲಿರಿಸಿದ**
**ಗುರು ಚೆನ್ನಬಸವಣ್ಣಲ್ಲದೆ ಮತ್ತೋರ್ವನ ಕಾಣೆ**
**ನೋಡಾ, ಕಪಿಲ ಸಿದ್ಧಮಲ್ಲಿಕಾರ್ಜುನಾ.**

ಶಿವಯೋಗಿ ಸಿದ್ಧರಾಮರ ಈ ವಚನ ಸಾರ್ವಕಾಲಿಕ ಸತ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ನಿಜವಾದ ಗುರು ಅರಿವಿನ ಸಾಗರ, ನಿರ್ಮಲ ಜ್ಞಾನ ನೀಡುವುದು ಅವರ ನಿತ್ಯ ಕಾಯಕ. ಅಂತೆಯೇ ಲಿಂ. ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬದುಕು ಎಲ್ಲರಿಗೂ ಮಾರ್ಗದರ್ಶಿಯಾಗಿದೆ.

ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಕಠಿಣ ತಪಶ್ಚರ್ಯಯಿಂದ, ನಿಷ್ಕಳಂಕ ಘೋರ ವೈರಾಗ್ಯದಿಂದ, ಸಂತ ಶ್ರೇಷ್ಠರಿಗೆ ಮಾತ್ರವೇ ಸಾಧ್ಯವಾಗಬಹುದಾದ ಸಂಕಲ್ಪ ಸಿದ್ಧಿ ಸಾಧನೆಗಳಿಂದ ಅವರ ಬದುಕೊಂದು ಲೋಕಕ್ಕೆ ವಿಸ್ಮಯವಾಗಿದೆ. ವೈರಾಗ್ಯದಲ್ಲಿ ಅಲ್ಲಮಪ್ರಭುಗಳನ್ನು, ದಾಸೋಹದಲ್ಲಿ ಬಸವಣ್ಣನವರನ್ನು, ಜ್ಞಾನದಲ್ಲಿ ಚನ್ನಬಸವಣ್ಣನವರನ್ನು, ಕಾಯಕದಲ್ಲಿ ಸಿದ್ಧರಾಮೇಶ್ವರರನ್ನು ಹೋಲುತ್ತಾರೆ. ಅನ್ನ-ಜ್ಞಾನ-ಭಕ್ತಿ ದಾಸೋಹಗಳಿಂದಾಗಿ ಸಿದ್ಧಗಂಗಾ ಕ್ಷೇತ್ರವನ್ನು ಈಗಾಗಲೇ ಪ್ರಸ್ತಾಪಿಸಿದಂತೆ ಹನ್ನೆರಡನೆಯ ಶತಮಾನದ ಕಲ್ಯಾಣವನ್ನು ಮತ್ತೆ ನೆನಪಿಗೆ ತರುವಂತೆ ಮಾಡಿದ್ದಾರೆ.

ಪರಮಪೂಜ್ಯ ಶ್ರೀಗಳವರು ಲೋಕಕಲ್ಯಾಣದಲ್ಲಿ ತಮ್ಮನ್ನು ಅರ್ಪಿಸಿಕೊಂಡು ಸಂತೋಷ ಕಂಡವರು. "ಹಸಿದ ಹೊಟ್ಟೆಗೆ ತುತ್ತು ಅನ್ನವನ್ನು ನೀಡುವುದಕ್ಕಿಂತ ದೊಡ್ಡ ಸೇವೆ ಮತ್ತೊಂದಿಲ್ಲ" ಎಂಬ ತಮ್ಮ ಪೂಜ್ಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳವರ ಆಶಯ, ಆಕಾಂಕ್ಷೆಯನ್ನು ಸಾಕಾರಗೊಳಿಸಿದವರು, ಘಟದಿಂದ ಮಠವೆಂಬುದನ್ನು ಸಾಬೀತುಗೊಳಿಸಿದವರು.

**ಕಂಡುದೆಲ್ಲ ಪಾವನ ಹೇಳಿದ್ದೆಲ್ಲ ಪರಮ ಬೋಧೆ**
**ಮುಟ್ಟಿದ್ದೆಲ್ಲವೂ ಪರುಷದ ಸೋಂಕು**
**ಒಡನೆ ನುಡಿದವರು ಸದ್ಯೋನ್ಮುಕ್ತರು**
**ಸುಳಿದ ಸುಳಿವೆಲ್ಲ ಜಗತ್ಪಾವನ**
**ಮೆಟ್ಟಿದ ಧರೆಯಲ್ಲ ಅವಿಮುಕ್ತ ಕ್ಷೇತ್ರ**
**ಸೋಂಕಿದ ಜಲವೆಲ್ಲ ಪುಣ್ಯ ತೀರ್ಥಂಗಳು**
**ಶರಣೆಂದು ಭಕ್ತಿ ಮಾಡಿದವರೆಲ್ಲ ಸಾಯುಜ್ಯರು**
**ಗುಹೇಶ್ವರ ನಿಮ್ಮ ಶರಣರ ಸುಳುಹಿನ**
**ಸೊಗಸನುಪಮಿಸಬಾರದು.**

ಅನುಭಾವಿ ಪ್ರಭುದೇವರ ಈ ವಚನಕ್ಕೆ ಅರ್ಥಪೂರ್ಣವಾದ ವ್ಯಾಖ್ಯಾನ ಬರೆದವರು ಈ ಯುಗದ ಜಂಗಮಜ್ಯೋತಿ. ಆಧ್ಯಾತ್ಮದ ಮಹಾಬೆಳಗು ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮನುಕುಲದ ಉದ್ಧಾರಕ್ಕಾಗಿ ಅವತರಿಸಿದ ಯುಗಪುರುಷರು. ತನ್ನದೆಂಬುದು ಏನೂ ಇಲ್ಲವೆಂದು ಎಲ್ಲವೂ ಶಿವನ ದಯೆಯೆಂದು ಭಾವಿಸಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ತಮ್ಮ ಜೀವಿತದ

ಒಂದೊಂದು ಕ್ಷಣವನ್ನು ಸಾರ್ಥಕಪಡಿಸಿಕೊಂಡ ಮಹಾನ್ ಸಾಧಕರು.

ಸಿದ್ಧಗಂಗೆಯ ಈ ದಿವ್ಯಚೇತನ ಕಾಯಕ-ದಾಸೋಹ ಧರ್ಮಕ್ಕೆ ಘನತೆಯನ್ನು ತಂದುಕೊಟ್ಟವರು. ಧರ್ಮಾಚರಣೆಗೆ ಹೃದಯ ಶ್ರೀಮಂತಿಕೆಯ ಸ್ಪರ್ಶ ನೀಡಿದವರು. ಅನ್ನ, ವಿದ್ಯೆ, ಧಾರ್ಮಿಕ ಮಾರ್ಗದರ್ಶನ ಅರಸಿ ಬಂದ ಲಕ್ಷಾಂತರ ಕೈಗಳಿಗೆ ಮಹಾಪ್ರಸಾದವನ್ನು ನೀಡಿ ಆಶೀರ್ವದಿಸಿದ ಈ ಮಹಾದಾಸೋಹಿ ತಮ್ಮ ಸುದೀರ್ಘ ಸಾಧನಪಥದಲ್ಲಿ ಸಾಗಿರುವುದು. "ಇದೆಲ್ಲ ನಮ್ಮ ಗುರುಗಳ ಆಶೀರ್ವಾದ, ಸಿದ್ಧಲಿಂಗನ ಕೃಪೆ" ಎಂಬುದು ಅವರ ಅಚಲ ನಂಬಿಕೆಯಾಗಿತ್ತು.

**ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆ :** ಭಾರತೀಯರು ಪುರಾತನ ಕಾಲದಿಂದಲೂ ವಿದ್ಯೆಗೆ ಉನ್ನತವಾದ ಸ್ಥಾನವನ್ನು ನೀಡುತ್ತಾ ಬಂದಿರುವುದು ಪುರಾಣ ಇತಿಹಾಸವನ್ನು ಅವಲೋಕಿಸಿದಾಗ ಸ್ಪಷ್ಟವಾಗುತ್ತದೆ. ವಿದ್ಯೆ ಇಲ್ಲದವರನ್ನು ಪಶುವಿಗೆ ಸಮಾನ ಎಂದು ಹೇಳುವುದರ ಮೂಲಕ ವಿದ್ಯೆಯ ಮಹತ್ವವನ್ನು ತಿಳಿಸಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಶಿಕ್ಷಣಕ್ಕೆ ಹೆಚ್ಚು ಅವಕಾಶವಿರಲಿಲ್ಲ. ಪ್ರಾಥಮಿಕ ಶಿಕ್ಷಣ ಪಡೆಯಬೇಕಾದರೂ ವಿದ್ಯಾರ್ಥಿಗಳು ಹತ್ತಾರು ಮೈಲಿ ನಡೆದುಕೊಂಡು ಹೋಗಿ ಬರಬೇಕಾಗಿತ್ತು. ಆರ್ಥಿಕವಾಗಿ ಅನುಕೂಲವಿದ್ದವರು ಮಾತ್ರ ಶಿಕ್ಷಣ ಪಡೆಯಲು ಅವಕಾಶವಿತ್ತು. ಇದರಿಂದ ಸಾವಿರಾರು ಜನ ಗ್ರಾಮೀಣ ಪ್ರದೇಶದ ಮಕ್ಕಳು ಶಿಕ್ಷಣ ಪಡೆಯಲು ಸೂಕ್ತ ಅವಕಾಶವಿಲ್ಲದೆ ವಂಚಿತರಾಗುತ್ತಿದ್ದರು.

ಪರಮಪೂಜ್ಯ ಶ್ರೀಗಳವರಿಗೆ ಶಿಕ್ಷಣದಿಂದ ವಂಚಿತರಾಗುವ ಮಕ್ಕಳೆಲ್ಲರಿಗೂ ಸುಲಭವಾಗಿ ಶಿಕ್ಷಣ ದೊರೆಯುವಂತಾಗಬೇಕು ಎಂಬ ಕಳಕಳಿ, ದೂರದೃಷ್ಟಿ ಯಾಗಿತ್ತು. ಕನಿಷ್ಠ ಪ್ರಾಥಮಿಕ ಶಿಕ್ಷಣದಿಂದ ಪ್ರೌಢ ಶಿಕ್ಷಣದವರೆಗಾದರೂ ಅವರಿಗೆ ಶಿಕ್ಷಣ ಪಡೆಯುವ ಅವಕಾಶ ಕಲ್ಪಿಸಿಕೊಡಬೇಕೆಂದು ಘನ ಉದ್ದೇಶದಿಂದ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ಪ್ರಾರಂಭಿಸಿ ಗ್ರಾಮೀಣ ಮಕ್ಕಳಿಗೆ ಶಿಕ್ಷಣ ಪಡೆಯುವ ಅವಕಾಶವನ್ನು ಕಲ್ಪಿಸಿಕೊಟ್ಟರು. ಶ್ರೀಮಠದಿಂದ ಶಿಕ್ಷಣ ಪಡೆದ ಲಕ್ಷಾಂತರ ವಿದ್ಯಾರ್ಥಿಗಳು ಸ್ವಾಭಿಮಾನದಿಂದ ಬದುಕನ್ನು ಕಟ್ಟಿಕೊಂಡಿದ್ದಾರೆ. ಅಲ್ಲದೆ ಸಾವಿರಾರು ಬೋಧಕ, ಬೋಧಕೇತರರಿಗೆ ಆಶ್ರಯ ನೀಡಿ ಸ್ವಾಭಿಮಾನದಿಂದ ಜೀವನ ನಡೆಸುವ ಭಾಗ್ಯವನ್ನು ಕರುಣಿಸಿದ್ದಾರೆ.

ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು ೧೯೧೭ ರಲ್ಲಿ ಚಿಕ್ಕ ಪ್ರಮಾಣದಲ್ಲಿ ಸ್ಥಾಪಿಸಿದ ವೇದ ಮತ್ತು ಸಂಸ್ಕೃತ ಪಾಠಶಾಲೆ ಇಂದು ಅವರ ಆಶೀರ್ವಾದ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಂಕಲ್ಪ ಮತ್ತು ಸೇವಾ ನಿಷ್ಠೆಯಿಂದ ಹೆಮ್ಮರವಾಗಿ ಬೆಳೆದು ನಿಂತಿದೆ. ಪ್ರಾಥಮಿಕ ಪೂರ್ವ ಶಿಕ್ಷಣದಿಂದ ಹಿಡಿದು ಪದವಿ ಶಿಕ್ಷಣದವರಿಗೆ, ಶಿಕ್ಷಕರ ತರಬೇತಿ ಸಂಸ್ಥೆಗಳಿಂದ ಕೈಗಾರಿಕಾ ತರಬೇತಿ ಕೇಂದ್ರಗಳವರೆಗೂ, ತಾಂತ್ರಿಕ ಶಿಕ್ಷಣ ಸಂಸ್ಥೆ, ಪಾಲಿಟೆಕ್ನಿಕ್, ಫಾರ್ಮಸಿ ಕಾಲೇಜು, ಸಂಸ್ಕೃತ ಪಾಠಶಾಲೆಗಳು ಸೇರಿದಂತೆ ೧೨೫ಕ್ಕೂ ಹೆಚ್ಚು ಶಾಲಾ ಕಾಲೇಜುಗಳು ನಡೆಯುತ್ತಿದ್ದು ಸುಮಾರು ೪೫ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ.

ಸಿದ್ಧಗಂಗಾ ಮಠ ಎಂದರೇನು ಎಂಬ ಸ್ಪಷ್ಟ ಕಲ್ಪನೆ ಬರಬೇಕಾದರೆ ಮಠಕ್ಕೆ ಬಂದೇ ನೋಡಬೇಕು. ರಾಜ್ಯದ ಮೂಲೆ ಮೂಲೆಗಳಿಂದ ಬಂದ ಸಾವಿರಾರು ಬಡಮಕ್ಕಳು ಇಲ್ಲಿ ನೆಮ್ಮದಿಯಿಂದ ಬದುಕುತ್ತಿರುವುದು, ಆ ಮಕ್ಕಳ ಮುಖದಲ್ಲಿ ನಗುಮಾಸದೇ ಇರುವುದು, ಎಲ್ಲರೂ ಸಂತೃಪ್ತಿಯಿಂದ ಇರುವುದು ಇವೆಲ್ಲವುಗಳ ಹಿಂದೆ ಪೂಜ್ಯ ಶ್ರೀಗಳವರ ದೂರದೃಷ್ಟಿ ಚಿಂತನೆಗಳನ್ನು ನೋಡಿದಾಗ 'ಅದ್ಭುತ' ಎಂಬ ಉದ್ಗಾರ ಹೊರಡದೇ ಇರಲು ಸಾಧ್ಯವಿಲ್ಲ.

"ನಮಗೆ ಬೇರೆ ಕೈಲಾಸ ಕಾಣುವುದಿಲ್ಲ. ಈ ಮಕ್ಕಳು ಸಂತೋಷದಿಂದ ಹೊಟ್ಟೆ ತುಂಬ ಉಂಡು ತೃಪ್ತಿಯಿಂದ ನಗುನಗುತ್ತ ಬರುತ್ತಾರಲ್ಲ. ಆಗ ನಮಗೆ ಕೈಲಾಸ ಕಂಡಷ್ಟು ತೃಪ್ತಿ ಆಗುತ್ತದೆ" ಎಂದು ಪೂಜ್ಯ ಶ್ರೀಗಳವರು ಆಗಾಗ ಹೇಳುತ್ತಿದ್ದರು. ಹೊಟ್ಟೆ ತುಂಬಿದ ತೃಪ್ತಿಯಿಂದ ಉತ್ತಮ ಕಾಯಕ ಹಾಗೂ ಆ ಮೂಲಕ ಉತ್ತಮ ಸಮಾಜದ ನಿರ್ಮಾಣ ಸಾಧ್ಯ ಎಂಬುದು ಸ್ವಾಮೀಜಿ ಅವರ ಬಲವಾದ ನಂಬಿಕೆಯಾಗಿತ್ತು.

'ನಾಡಿನ ಮೂಲೆ ಮೂಲೆಗಳಿಂದ ಅನಾಥರನ್ನು ಬರಮಾಡಿಕೊಂಡು, ಅವರಿಗೆಲ್ಲ ಅನ್ನದಾನದ ಜೊತೆಯಲ್ಲಿ ಜ್ಞಾನವನ್ನು ದಾನ ಮಾಡುತ್ತಿರುವ ದೃಶ್ಯವಂತೂ ನನ್ನ ಪಾಲಿಗೆ ಅಸಾಮಾನ್ಯ ನೋಟವೆನಿಸುತ್ತದೆ. ಅಸಂಖ್ಯಾತ ಬಡಬಗ್ಗರ ಇಹದ ಅವಶ್ಯಕತೆಗಳನ್ನು ಪೂರೈಸುತ್ತಿರುವುದು ಮಾತ್ರವಲ್ಲ, ಅವರ 'ಪರ'ವನ್ನು ಸಹ ಈ ತಾವಿಗೆ



ಋಣಿಯನ್ನಾಗಿ ಮಾಡುತ್ತಿರುವ ಕರ್ಮಭೂಮಿ ಇದಾಗಿದೆ' ಎಂದು ಹೇಳಿರುವ ಜ್ಞಾನಪೀಠ ಪುರಸ್ಕೃತ ಡಾ. ಕೆ. ಶಿವರಾಮ ಕಾರಂತರ ಮಾತು ಪೂಜ್ಯ ಶ್ರೀಗಳವರ ಸೇವೆಗೆ ನೀಡಿದ ಮಹೋನ್ನತ ನುಡಿ ಗೌರವವಾಗಿದೆ.

**ಶ್ರೀಕ್ಷೇತ್ರದ ಸಂಚಾರಿ ವಿಶ್ವವಿದ್ಯಾಲಯ ಗ್ರಾಮಾಂತರ ಬಸವ ಜಯಂತಿ :** ಸಮಾಜದ ಒಳಿತಿಗಾಗಿ ಅಂತರಂಗ ಬಹಿರಂಗ ಶುದ್ಧಿಗಾಗಿ ಬಸವಣ್ಣನವರು ನುಡಿದು ನಡೆದು ತೋರಿಸಿದ ಜೀವನ ಮೌಲ್ಯಗಳ ಪುನರುತ್ಥಾನಗೊಳಿಸಲು ಪರಮಪೂಜ್ಯರು ರೂಪಿಸಿದ ಹಲವಾರು ವಿಶಿಷ್ಟ ಕಾರ್ಯಕ್ರಮಗಳಲ್ಲಿ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ಮುಕುಟಪ್ರಾಯವಾಗಿದೆ. ರೋಗಗ್ರಸ್ತ ಸಮಾಜಕ್ಕೆ ಕಾಯಕಲ್ಪ ನೀಡಿ ಅವರ ಬೌದ್ಧಿಕ ಹಾಗೂ ಮಾನಸಿಕ ವಿಕಾಸಕ್ಕೆ ಆರೋಗ್ಯಕರ ವಾತಾವರಣವನ್ನು ಮೂಡಿಸಲು ಪ್ರೇರಕ ಹಾಗೂ ಪೂರಕವಾಗಿರುವ ಬಸವ ಜಯಂತಿ ಕಾರ್ಯಕ್ರಮದ ಫಲ ನಮಗಿಂದು ಪ್ರತ್ಯಕ್ಷವಾಗಿ ಕಾಣಿಸದಿದ್ದರೂ ಪರೋಕ್ಷವಾಗಿ ಸಮಾಜದ ಮೇಲೆ ಅದರಿಂದಾಗುವ ಪರಿಣಾಮ, ಪ್ರಯೋಜನ ಅನನ್ಯ. ಬೆಲೆ ಕಟ್ಟಲಾಗದಂತಹದು. ಪರಮಪೂಜ್ಯರ ಮಹತ್ವಾಕಾಂಕ್ಷೆಯ ದೂರದೃಷ್ಟಿಯ ಈ ಕಾರ್ಯಕ್ರಮ ಸಮಾಜದ ಉನ್ನತಿಗೆ ನಾಂದಿಯಾಗಿದೆ.

೧೯೭೯ ರಿಂದ ನಿರಂತರವಾಗಿ ನಡೆದುಕೊಂಡು ಬರುತ್ತಿರುವ ಬಸವ ಜಯಂತಿ ಕಾರ್ಯಕ್ರಮ ವರ್ಷದಲ್ಲಿ ಒಂದು ದಿನ ನಡೆಯುವ ಕಾರ್ಯಕ್ರಮವಲ್ಲ. ಇದು ವರ್ಷವಿಡೀ ನಡೆಸಿಕೊಂಡು ಬರುತ್ತಿರುವ ಉದ್ದೇಶಿತ ಕಾರ್ಯಕ್ರಮ. ಬಸವಾದಿ ಶರಣರ ಜೀವನ ಮೌಲ್ಯ-ಸಾಮಾಜಿಕ ಚಳವಳಿಯ ಹಿನ್ನೆಲೆಯ ಬಗ್ಗೆ ಅರಿವು ಮೂಡಿಸುವ ಉದಾತ್ತ ಕಾರ್ಯಕ್ರಮವಾಗಿದೆ.

**ರೈತರ ಬಗ್ಗೆ ಕಾಳಜಿ :** ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರಿಗೆ ರೈತರನ್ನು ಕಂಡರೆ ತುಂಬು ಅಭಿಮಾನ, ಕಳಕಳಿಯಿತ್ತು. ತಾವೇ ಕೃಷಿ ಕಾಯಕ ಮಾಡಿ ಕೃಷಿಯ ಒಳ ಹೊರಗುಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದವರು ತುಂಬಾ ವಿರಳ. ಗ್ರಾಮೀಣ ಪ್ರದೇಶದಿಂದ ಪೂಜ್ಯರನ್ನು ದರ್ಶನ ಮಾಡಿ ಆಶೀರ್ವಾದ ಪಡೆಯಲು ಬಂದಾಗ ಶ್ರೀಗಳವರು ಮೊದಲು ಕೇಳುತ್ತಿದ್ದ ಪ್ರಶ್ನೆ 'ಮಳೆ ಆಗಿದೆಯಾ', 'ಬೆಳೆ ಹೇಗಿದೆ' ಎಂದು. ರೈತರು ಪ್ರೀತಿ, ಭಕ್ತಿಯಿಂದ ತಾವು ಬೆಳೆದು ತಂದು ಕೊಡುವ ಸೇರು, ಪಾವು ದವಸ ಧಾನ್ಯಗಳು ಮಠದ ದಾಸೋಹಕ್ಕೆಂದು ಬಂದಾಗ ಅಕ್ಷಯವಾಗುತ್ತದೆ. ಬೆಳೆ ಚೆನ್ನಾದರೆ ರೈತರು ನೆಮ್ಮದಿಯ ಜೀವನ ನಡೆಸುತ್ತಾರೆಂಬ ಆಶಯ. ರೈತರ ಬದುಕು ಹಸನಾಗಬೇಕೆಂಬ ಕಳಕಳಿ ಅಪಾರವಾಗಿತ್ತು.

ರೈತರು ಆಧುನಿಕ ಕೃಷಿ ಪದ್ಧತಿಯನ್ನು ಅಳವಡಿಸಿ ಕೊಂಡು ಕೃಷಿ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವುದರ ಮೂಲಕ ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕೆಂಬುದು ಪೂಜ್ಯರ ಆಶಯವಾಗಿತ್ತು. ರೈತರಿಗೆ ಆಧುನಿಕ ಕೃಷಿಯ ಬಗ್ಗೆ ಅರಿವು ಮೂಡಿಸಲು ಪ್ರತಿವರ್ಷ ಶಿವರಾತ್ರಿ ಸಂದರ್ಭದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ವನ್ನು ನಡೆಸಿಕೊಂಡು ಬರಲಾಗುತ್ತಿದೆ. ಹದಿನೈದು ದಿನಗಳ ಕಾಲ ನಡೆಯುವ ಈ ವಸ್ತುಪ್ರದರ್ಶನವು ಗ್ರಾಮೀಣರ ಪಾಲಿಗೆ ಪ್ರಯೋಗ ಶಾಲೆಯಾಗಿದೆ. ಪ್ರಚಲಿತ ವಿದ್ಯಮಾನಗಳ ಬಗ್ಗೆ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿಸಲು ಏರ್ಪಡಿಸುವ ವಸ್ತುಪ್ರದರ್ಶನ ಸಮಾಜದ ಹಿತವನ್ನು ಬಯಸುವ ಸೇವಾದೃಷ್ಟಿಯುಳ್ಳದ್ದಾಗಿದೆ.

ಕಳೆದ ಮೂರು ದಶಕಗಳಿಂದ ಶ್ರೀಮಠದ ಉತ್ತರಾಧಿಕಾರಿಯಾಗಿ ಪರಮಪೂಜ್ಯರ ಮಾರ್ಗದರ್ಶನ ದಂತೆ ನಡೆದುಕೊಂಡು ಬರುತ್ತಿರುವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಆಗಸ್ಟ್ ೪, ೨೦೧೧ ರಂದು ನಡೆದ ಸರಳ, ಐತಿಹಾಸಿಕ ಸಮಾರಂಭ ದಲ್ಲಿ ಶ್ರೀಮಠದ ಅಧ್ಯಕ್ಷರನ್ನಾಗಿ ಮಾಡಿ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಟ್ಟು ಆಶೀರ್ವಾದ ಮಾಡಿದುದು ಶ್ರೀಮಠದ ಇತಿಹಾಸದಲ್ಲಿ ಮರೆಯಲಾಗದ ಸುದಿನ. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹೇಳಿದಂತೆ "ತಮ್ಮ ಗುರುಗಳ ಮಾರ್ಗದರ್ಶನದಿಂದ ಮಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸುವುದರ ಜೊತೆಗೆ ಆಧ್ಯಾತ್ಮಿಕ ಸಂಪತ್ತನ್ನು ಹೆಚ್ಚಿಸಿಕೊಳ್ಳುವತ್ತ ಗಮನಕೊಡುತ್ತೇವೆ" ಎಂದು ಅವರ ಹೃದಯಾಂತರಾಳದಿಂದ ಮೂಡಿಬಂದ ನುಡಿನಮನ ಗಳನ್ನು ಶ್ರದ್ಧೆ, ನಿಷ್ಠೆ, ಕ್ರಿಯಾಶೀಲತೆ, ಕರ್ತೃತ್ವ ಶಕ್ತಿಯಿಂದ ಶ್ರೀಮಠವನ್ನು ಬೆಳಕಿನ ಪಥದಲ್ಲಿ ಮುನ್ನಡೆಸುತ್ತಿದ್ದಾರೆ. ತಮ್ಮ ಶಿವನುಡಿಗಳಿಗೆ ಸಾಕಾರ ರೂಪವನ್ನು ಕೊಡುತ್ತಿದ್ದಾರೆ. ■







ಸ್ಮರಣೆ

# ಶ್ರೀ ಅಟವೀಸ್ವಾಮಿಗಳು

– ಪ್ರೇಮಾ ಮಲ್ಲಣ್ಣ *



ವೀರಶೈವ ಧರ್ಮ ತನ್ನ ಪ್ರಾದುರ್ಭಾವದಿಂದ ಇಲ್ಲಿಯುವರೆಗೂ ಎಂದಿಗೂ ಕಳೆಗುಂದದ ಮಣಿದೀಪದಂತೆ ಪ್ರಕಾಶಿಸುತ್ತಿದೆ. ಇದಕ್ಕೆ ಸಂತರ, ಶರಣರ, ತಪೋನಿಧಿಗಳ ತಪಸ್ಸಾಧನೆಯ ಮಹಿಮೆಯೇ ಕಾರಣವಾಗಿದೆ. ಒಂದು ದೇಶ ತನ್ನ ಇತಿಹಾಸವನ್ನು ಕಟ್ಟಿಕೊಳ್ಳುವುದು ಕೇವಲ ಹೆಸರಾಂತ ವಿಜಯೀ ಚಕ್ರವರ್ತಿಗಳಿಂದಲಾಗಲಿ ವೀರ ಯೋಧರಿಂದಾಗಲಿ ಅಲ್ಲ, ಬದಲಿಗೆ ಯಾರ ಕರುಳು ಸಕಲ ಜೀವಿಗಳ ಲೇಸಿಗಾಗಿ ಮಿಡಿಯುತ್ತಿರುವುದೋ, ಯಾರು ತಮ್ಮ ಜೀವನವನ್ನು ಮನುಕುಲದ ಉದ್ಧಾರಕ್ಕಾಗಿ ಮುಡಿಪಾಗಿಟ್ಟಿರುತ್ತಾರೋ, ಯಾರು ಸಮಾಜವನ್ನು ಧರ್ಮದ ಹಾದಿಯಲ್ಲಿ ಮುನ್ನಡೆಸುತ್ತಿರುತ್ತಾರೋ, ಯಾರ ವಾಣಿ ದೇಶಕಾಲಾತೀತವಾಗಿ ಸರ್ವರಿಗೂ ಅರಿವನ್ನು ಉಂಟುಮಾಡುತ್ತಿರುವುದೋ ಅಂತಹ ಯುಗ ಪ್ರವರ್ತಕರ ಮತ್ತು ಮಹಾಮಹಿಮ ಯೋಗಿಗಳಿಂದ ಚರಿತ್ರೆ ನಿರ್ಮಾಣವಾಗುತ್ತದೆ. ಅಂಥವರ ಆತ್ಮಚೈತನ್ಯ ಜನಮನದಲ್ಲಿ ಭಕ್ತಿ-ಶಕ್ತಿಗಳನ್ನು ಮೂಡಿಸುತ್ತದೆ. ಇಂತಹ ವಿಭೂತಿಪುರುಷರು ತಮ್ಮ ಭೌತಿಕ ದೇಹವನ್ನು ತ್ಯಾಗ ಮಾಡಿದ್ದರೂ ಅವರ ಸತ್‌ಸಂಕಲ್ಪಗಳು ಜಾಗೃತವಾಗಿದ್ದು ಭಕ್ತರ ಬೇಡಿಕೆಗಳನ್ನು ಪೂರೈಸುತ್ತವೆ. ಇದಕ್ಕೆ ಅಟವೀಶರೇ ಸಾಕ್ಷಿಯಾಗಿದ್ದಾರೆ.

ಅಟವೀಸ್ವಾಮಿಗಳ ಜನ್ಮಸ್ಥಳ, ತಂದೆ-ತಾಯಿ, ಬಾಲ್ಯಗಳ ವಿವರಣೆ ಇಲ್ಲವೆಂದೇ ಹೇಳಬಹುದು. ಅವರು ಕಾಣಿಸಿ ಕೊಂಡದ್ದೇ ಪವಾಡಸದೃಶರೀತಿಯಲ್ಲಿ, ಉತ್ತರ ಕರ್ನಾಟಕದಲ್ಲಿ ಪವಾಡಗಳನ್ನು ಮೆರೆದು ದಕ್ಷಿಣಕ್ಕೆ ಆಗಮಿಸಿ ಶ್ರೀ ಗೋಸಲ ಚೆನ್ನಬಸವೇಶ್ವರರು ವಿರಮಿಸಿದ್ದ ಗುಬ್ಬಿ ಕ್ಷೇತ್ರದಲ್ಲಿ ನೆಲೆ ನಿಂತರು. ಶ್ರೀಗಳವರ ಕಾರ್ಯಕ್ಷೇತ್ರದ ವಿಸ್ತಾರದ ಬಗ್ಗೆ, ಅವರು ಭೇಟಿ ನೀಡಿದ ಸ್ಥಳಗಳ ಬಗ್ಗೆ ಸ್ಪಷ್ಟವಾಗಿ ನಮಗೆ ತಿಳಿದು ಬರದಿದ್ದರೂ ಗುಬ್ಬಿ, ತುಮಕೂರು, ಚಿಕ್ಕತೊಟ್ಲುಕೆರೆ ಈ ಸ್ಥಳಗಳಲ್ಲಿ ಅನೇಕ ಸಮಾಜೋಪಯೋಗಿ ಕಾರ್ಯಗಳನ್ನು ಮಾಡಿ ಜನರ ಕಷ್ಟಗಳನ್ನು ಪರಿಹರಿಸಿದರು. ಇಂದಿಗೂ ಅವರ ಮಹಿಮೆ ಪ್ರಕಟಗೊಳ್ಳುತ್ತಲೇ ಇದೆ. ಭಕ್ತರ ಕೋರಿಕೆಗಳು ಈಡೇರಲ್ಪಡುತ್ತವೆ. ಧರ್ಮಜಾಗೃತಿ ಕಾರ್ಯ ಸೀಮಾತೀತವಾಗುತ್ತಿದೆ.

ಶ್ರೀಗಳ ಜೀವಿತಾವಧಿಯ ಬಗ್ಗೆ ಒಂದು ಗಾಢವಾದ ನಂಬಿಕೆ ಜನರ ಮನದಲ್ಲಿ ನೆಲೆಯೂರಿದೆ. ಅವರು ೧೨ನೇ ಶತಮಾನದ ಶರಣರು, ೭೭೭ ವರ್ಷಗಳ ಕಾಲ ಜೀವಿಸಿದ್ದು; ೧೯೦೧ರಲ್ಲಿ ನಿರ್ವಿಕಲ್ಪ ಸಮಾಧಿ ಪಡೆದರು ಎಂಬ ಸಂಗತಿಯನ್ನು 'ಗರಗದ ಮಡಿವಾಳೇಶ್ವರ' ಚರಿತ್ರೆಯಲ್ಲಿ ಶಿಶುನಾಳ ಷರೀಫರ ಹಾಡಿನಲ್ಲಿ, ತುಮಕೂರಿನ ನಂಜುಂಡೇಶ್ವರ ವಿರಚಿತ 'ಶ್ರೀ ಅಟವೀಶನ ಲೀಲೆಗಳು' ಎಂಬ ಗ್ರಂಥದಲ್ಲಿ ಕಾಣಸಿಗುತ್ತದೆ. ಸ್ಥೂಲವಾಗಿ ತಿಳಿದು ಬರುವ ಸಂಗತಿ ಹೀಗಿದೆ- ರೇಚಣ್ಣನೆಂಬ ಶರಣ ಕಲ್ಯಾಣದ ಜಂಗಮರಿಗೆ ವೀಳ್ಯವನ್ನು ನೀಡಿದಾಗ ಕೊನೆಯಲ್ಲಿದ್ದ ಶರಣನಿಗೆ ಕೆಟ್ಟುಹೋಗಿದ್ದ ಎಲೆ

* 'ಶಾಂಭವಿ' 3ನೇ ಅಡ್ಡರಸ್ತೆ, ಸೋಮೇಶ್ವರ ಪುರಂ, ತುಮಕೂರು-572 102.







ಸಿಕ್ಕಿತು. ಇದು ಪಂಕ್ತಿ ಭೇದ ಮಾಡಿದಂತಾಯಿತು. ಇದನ್ನು ಅರಿತಿದ್ದ ಚೆನ್ನಬಸವಣ್ಣನವರು ಉಳುವೆಯಲ್ಲಿ ರೇಚಣ್ಣನನ್ನು ಕರೆದು ನೀನು ಭರತಖಂಡದಲ್ಲೆಲ್ಲಾ ಸಂಚರಿಸಿ ಅಲ್ಲಲ್ಲಿ ಅನ್ನದಾಸೋಹ ಜ್ಞಾನ ದಾಸೋಹಗಳನ್ನು ನಡೆಸುತ್ತ ಶರಣ ಧರ್ಮವನ್ನು ಮತ್ತು ವಚನ ಸಾಹಿತ್ಯವನ್ನು ನಿನ್ನ ೭೭೭ ವರ್ಷಗಳ ಕಾಲಮಾನದವರೆಗೆ ಮಾಡಬೇಕೆಂದು ಸೂಚಿಸಿದರಂತೆ. ಅಂತೆಯೇ ಆ ಶರಣ ಭರತಖಂಡದ ಪರ್ಯಟನೆ ಮಾಡಿ, ತನಗೆ ವಿಧಿಸಿದ್ದ ಕಾರ್ಯಗಳನ್ನು ಮಾಡುತ್ತ ಕೊನೆಗೆ ಬೆಳಗಾವಿ ಜಿಲ್ಲೆಯ ಅಂಕಲಗಿಯ ಅಡವಿಯಲ್ಲಿ ಕಾಣಿಸಿ ಕೊಂಡರು. ಅವರನ್ನು ಕಂಡವರು ಹೆಸರು ಕೇಳಿದಾಗ ಅಡವಿಯಲ್ಲಿದ್ದಾಗ ಅಡವಿಯಪ್ಪ, ಊರಿನಲ್ಲಿದ್ದರೆ ಊರಪ್ಪ ಎಂದರಂತೆ. ಮುಂದೆ ಅವರ ಉತ್ತರವೇ ಅಡವಿ ಅಥವ ಅಟವಿಸ್ವಾಮಿಗಳು ಎಂದಾಯಿತು. ಅಥಣಿ ಶಿವಯೋಗಿಗಳಿಗೆ ಇವರ ಐತಿಹ್ಯ ಗೊತ್ತಿತ್ತೆಂದು ತಿಳಿದು ಬರುತ್ತದೆ.

ಶ್ರೀಗಳು ಕೂಡಲ ಗ್ರಾಮದ ಮುಖಾಂತರ ಸುಮಾರು ೧೮೪೦ರಲ್ಲಿ 'ಗುಬ್ಬಿ' ನಗರಕ್ಕೆ ಬಂದಿರಬಹುದೆಂದು ತಿಳಿಯುತ್ತದೆ. ಗುಬ್ಬಿಯ ತೋರೆಮಠದಲ್ಲಿ ವಾಸ್ತವ್ಯ ಹೂಡಿ ಗೋಸಲ ಚೆನ್ನಬಸವೇಶ್ವರರ ಗದ್ದುಗೆಯನ್ನು ಶ್ರದ್ಧಾ ಭಕ್ತಿಯಿಂದ ಅರ್ಚನೆ ಗೈಯ್ಯುತ್ತಿದ್ದು ಜನಹಿತ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ೧೮೯೬ರಲ್ಲಿ ಪಾಪನಾಶಿನಿ ಕೊಳವನ್ನು ಕಟ್ಟಿಸಿದರು. ಗೋಸಲ ಚೆನ್ನಬಸವೇಶ್ವರರ ಜಾತ್ರೆಗೆ ಏರ್ಪಾಟು ಮಾಡಿದರು. ಸುತ್ತಮುತ್ತಲಿನವರ ಕರೆಸಿ ಬೆಳ್ಳಿಪಲ್ಲಕ್ಕಿಯಲ್ಲಿ ಗೋಸಲಪ್ಪನವರನ್ನು ಕೂರಿಸಿ ಉತ್ಸವ ಮಾಡಲು ಬೆಳ್ಳಿಯನ್ನು ಕೊಡಿಸಲು ಹೇಳಿದರು. ಸಾಕಷ್ಟು ಬೆಳ್ಳಿಯನ್ನು ಕೊಡಿಸಿಕೊಡಲಾಗಲಿಲ್ಲ, ಯೋಗಿಗಳ ಯೋಗಸಿದ್ಧಿಯ ಫಲಕ್ಕೆ ಚ್ಯುತಿಯಿಲ್ಲ. ಶ್ರೀಗಳು ಹೆಚ್ಚು ಹೆಚ್ಚು ಸಾಧನೆ ಮಾಡಿದರು. ತಾವೇ ಸಂಚಾರ ಮಾಡಿ ಅಂತಹ ಅಭೀಷ್ಟೆಯನ್ನು ತಿಳಿಸುತ್ತಾ ಬಂದರು. ಅವರ ಸಂಚಾರದಲ್ಲಿ ಅನೇಕ ಪವಾಡಗಳು ಜರುಗಿದವು. ನೆರವು ತಂತಾನೆ ಹರಿದು ಬಂತು. ಬೆಳ್ಳಿಯ ಪಲ್ಲಕ್ಕಿ ತಯಾರಾಗಿ ಉತ್ಸವ ನೆರವೇರಿತು. ಹಿಡಿದ ಕೆಲಸವನ್ನು ಸಾಧಿಸಬೇಕೆಂಬ ಛಲ ನಾವೂ ಪಾಲಿಸ ಬೇಕಲ್ಲವೇ? ಜನರಿಗೆ ಇವರ ಮೇಲಿದ್ದ ಶ್ರದ್ಧಾಭಕ್ತಿಗಳು ಹೆಚ್ಚಾಗಿ, ಪೂಜ್ಯರು ಸದಾ ತಮ್ಮಲ್ಲಿಯೇ ಉಳಿಯಬೇಕೆಂದು ಪ್ರಾರ್ಥಿಸಿದರು.

ಶ್ರೀ ಅಟವೀಸ್ವಾಮಿಗಳು ಲೋಕಸಂಚಾರ ಮಾಡುತ್ತಾ ಶ್ರೀಸಿದ್ಧಗಂಗಾ ಕ್ಷೇತ್ರಕ್ಕೆ ಬಂದ ಸಮಯದಲ್ಲಿ ಪೂಜ್ಯ ಸಿದ್ಧಲಿಂಗ ಸ್ವಾಮಿಗಳು ಮಠದಲ್ಲಿದ್ದುಕೊಂಡು ಶಿವಯೋಗಾನುಷ್ಠಾನದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಅವರಿಗೆ ಆಧ್ಯಾತ್ಮಿಕದ ಕಡೆಗೆ ಹೆಚ್ಚು ಒಲವಿದ್ದುದರಿಂದ ಲೋಕವ್ಯವಹಾರದ ಕಡೆ ಆಸಕ್ತಿಯಿರಲಿಲ್ಲ. ಅವರು ಶ್ರೀ ಅಟವಿಸ್ವಾಮಿಗಳಿಗೆ ಇಲ್ಲಿಯೇ ಕೆಲವು ಕಾಲ ಶಿವಯೋಗಾನುಷ್ಠಾನ ಮಾಡುತ್ತಾ ಶ್ರೀಮಠವನ್ನು ಮುನ್ನಡೆಸಬೇಕೆಂಬ ಆಶಯವನ್ನು ವ್ಯಕ್ತಪಡಿಸಿದರು. ಬಸವಾದಿ ಶರಣರ ಕಾಯಕ ದಾಸೋಹ ಸಿದ್ಧಾಂತವನ್ನು ಶ್ರೀಮಠದಲ್ಲಿ ಅನುಷ್ಠಾನ ಮಾಡಬೇಕೆಂದು ಬಯಸಿ ಶ್ರೀಮಠದ ಗುರುಪರಂಪರೆಯನ್ನು ಸ್ಮರಿಸುತ್ತಾ ದಾಸೋಹ ಜ್ಯೋತಿಯನ್ನು ಹಚ್ಚಿದರು. ಅವರು ಅಂದು ಹಚ್ಚಿದ ದಾಸೋಹ ಜ್ಯೋತಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಂಕಲ್ಪಸಿದ್ಧಿಯಿಂದ ಪ್ರಜ್ವಲಿಸುತ್ತಾ ಇಡೀ ವಿಶ್ವದ ಗಮನವನ್ನು ಸೆಳೆದಿದೆ. ಆ ವೇಳೆಗಾಗಲೇ ಶ್ರೀ ಅಟವೀಸ್ವಾಮಿಗಳವರಿಗೆ ಸೇವಾ ನಿರತರಾಗಿದ್ದ ಅಸಾಧಾರಣ ವ್ಯಕ್ತಿತ್ವ ಪಡೆದಿದ್ದ ಲಕ್ಕೂರು ರುದ್ರಪ್ಪನವರು ಶ್ರೀ ಅಟವಿಸ್ವಾಮಿಗಳವರ ಕೃಪಾದೃಷ್ಟಿಗೆ ಬಿದ್ದು ಶ್ರೀ ಉದ್ದಾನಶಿವಯೋಗಿಗಳೆಂಬ ಅಭಿಧಾನ ನೀಡಿ ಮಠವನ್ನು ಮುನ್ನಡೆಸುವಂತೆ ಆಶೀರ್ವದಿಸಿ ಲೋಕ ಸಂಚಾರವನ್ನು ಕೈಗೊಂಡರು. ಶ್ರೀ ಉದ್ದಾನ ಶಿವಯೋಗಿಗಳು ಶ್ರೀ ಅಟವೀ ಸ್ವಾಮಿಗಳು ಹಚ್ಚಿದ ದಾಸೋಹ ಜ್ಯೋತಿಯ ಜೊತೆಗೆ ಜ್ಞಾನಜ್ಯೋತಿಯನ್ನು ಹಚ್ಚಿ ಶ್ರೀಮಠದ ಕಾರ್ಯ ಚಟುವಟಿಕೆಗಳನ್ನು ಮತ್ತಷ್ಟು ವಿಸ್ತಾರವಾಗುವಂತೆ ಮಾಡಿದರು.

ಇದೇ ವೇಳೆಯಲ್ಲಿ ಚಿಕ್ಕತೊಟ್ಲುಕೆರೆಯಲ್ಲಿ ವಿರಕ್ತಮಠದ ಓಂಕಾರೇಶ್ವರ ಶಿವಯೋಗಿಗಳು ಸೃಷ್ಟಿಸಿದ ಕ್ಷೇತ್ರಕ್ಕೆ ಅಟವೀ ಶಿವಯೋಗಿಗಳು ಗಮಿಸಿ ನೆಲೆಸಿದರು. ಈ ತಪೋಭೂಮಿಯಲ್ಲಿ ಶಿವಯೋಗದ ಅನುಷ್ಠಾನದಲ್ಲಿ ಮಗ್ನರಾಗಿದ್ದು ಕೊಂಡು ಆಗಾಗ್ಗೆ ಸಂಚಾರ ಕೈಗೊಳ್ಳುತ್ತ ಜನಜಾಗೃತಿಗಾಗಿ ಅನೇಕ ಲೀಲೆಗಳನ್ನು ನಡೆಸಿದರು. ಶರಣರ ಸಂದೇಶಗಳನ್ನು ಹರಡಿದರು. ಜನರ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸಿ ಅವುಗಳಿಗೆ ಪರಿಹಾರ ತಂದುಕೊಟ್ಟರು. ಅಲ್ಲದೇ ಅವರನ್ನು ಸಂಸ್ಕಾರ

ವಂತರನ್ನಾಗಿ ಮಾಡಿದರು. ಶ್ರೀಗಳು ಸಿದ್ಧಗಂಗೆ, ಚಿಕ್ಕತೊಟ್ಲು ಕೆರೆ, ಗುಬ್ಬಿ ಈ ಮೂರೂ ಕಡೆ ಸಂಚರಿಸುತ್ತ ಶರಣರು ವಹಿಸಿದ್ದ ಮಣಿಹವನ್ನು ಶಿವನೊಪ್ಪುವ ತೆರದಲ್ಲಿ ನಿರ್ವಹಿಸಿದರು.

ಹೀಗೆ ಅನೇಕ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಕುಣಿಗಲ್ ಮಾರ್ಗವಾಗಿ ಓಂಕಾರೇಶ್ವರ ಕ್ಷೇತ್ರಕ್ಕೆ ಆಗಮಿಸಿದಾಗ ಅವರು ಮಾಡಿದ ಒಂದು ಪವಾಡ ಇಂದಿಗೂ ಸಾಕ್ಷಿಯಾಗಿ ಭಕ್ತರನ್ನು ತನ್ನತ್ತ ಸೆಳೆಯುತ್ತಿದೆ. ತಮಗೆ ಮಾವಿನ ಫಲದ ಮೇಲೆ ಇಚ್ಛೆಯುಂಟಾದಾಗ ಒಂದು ಮಾವಿನ ಸಸಿಯನ್ನು ನೆಟ್ಟರು. ಅದು ಸರ್ವಋತುವಿನಲ್ಲೂ ಫಲನೀಡುವ ಮರವಾಗಿ ಮಠದ ಮಧ್ಯಭಾಗದಲ್ಲಿ ಕಂಗೊಳಿಸುತ್ತಿದೆ. ಭಕ್ತರಿಗೆ ಅಚ್ಚರಿ ತರುತ್ತಿದೆ.

ಶರಣರು ಕೊಟ್ಟಿದ ಗಡುವು ಮುಗಿಯಿತು. ಶ್ರೀಗಳು ತಮ್ಮ ಇಹದ ಮಣಿಹವನ್ನು ಮುಗಿಸಿ, ವೈರಾಗ್ಯನಿಧಿಗಳೆನಿಸಿ ೧೯೧೧ರ ಕಾರ್ತೀಕ ಮಾಸ ಶುಕ್ಲಪಕ್ಷದ ದಶಮಿಯಂದು ಚಿಕ್ಕತೊಟ್ಲುಕೆರೆಯಲ್ಲಿ ನಿರ್ವಿಕಲ್ಪ ಸಮಾಧಿಗೆ ಹೋದರು. ಇದೊಂದು ಜಾಗೃತಗದ್ದಿಗೆಯಾಗಿದ್ದು ಭಕ್ತರಿಗೆ ಕಾಮಧೇನು ಕಲ್ಪವೃಕ್ಷವಾಗಿ ಅವರ ಕೋರಿಕೆಗಳನ್ನು ಈಡೇರಿಸುವ ತಾಣವಾಗಿದೆ.

ಶ್ರೀ ಅಟವೀಸ್ವಾಮಿಗಳು ತಮ್ಮ ಬೆಳವಣಿಗೆಯ ರಹಸ್ಯವನ್ನು ಹೇಗೆ ಕುತೂಹಲವನ್ನಾಗಿಸಿಟ್ಟಿರುವರೋ ಹಾಗೆಯೇ ಅವರ ಐಕ್ಯದ ವಿಷಯದಲ್ಲೂ ಅನೇಕ ದಂತ ಕಥೆಗಳಿವೆ. ಗುಬ್ಬಿಯ ತೋರೆಮಠದಲ್ಲಿ ಅವರ ಆಜ್ಞೆ ಪಡೆದೇ ಭಕ್ತರು ಸಮಾಧಿ ನಿರ್ಮಿಸಿದ್ದರು, ಅದು ಈಗ ಅವರು ಪೂಜೆಗೈದ ಸ್ಥಳವೆಂದು ಪೂಜಿಸಲಾಗುತ್ತಿದೆ. ಶ್ರೀ ಸಿದ್ಧಗಂಗೆಯಲ್ಲೂ ಅವರ ಹೆಸರಿನ ತೋರುಗದ್ದುಗೆಯಿದ್ದು ಪೂಜಾಕೈಂಕರ್ಯಗಳು ನಡೆಯುತ್ತಿವೆ. ಚಿಕ್ಕತೊಟ್ಲು ಕೆರೆಯಲ್ಲಿ ಶ್ರೀ ಅಟವೀಶರ ಗದ್ದುಗೆ ಇದ್ದು ಭಕ್ತರನ್ನು ಪೊರೆಯುತ್ತಿದೆ.

ಮೂರು ಗದ್ದುಗೆಗಳು ತ್ರಿವಿಧ ದಾಸೋಹ ತತ್ವವನ್ನು ಸಾರುತ್ತ ಗುರು-ಲಿಂಗ-ಜಂಗಮತತ್ತ್ವಕ್ಕೆ ಸಾಕ್ಷಿಗಳಂತಿವೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨



**ಸ್ಮರಣೆ**

# ಶ್ರೀ ಉದ್ದಾನ ಶಿವಯೋಗಿಗಳು

– ಲಿಂ. ಡಾ. ಮರುಳಸಿದ್ಧಯ್ಯ, ಮೈಸೂರು



ಶ್ರೀ ಶಿವಯೋಗಿಗಳ ವ್ಯಕ್ತಿತ್ವದಲ್ಲಿ ಬಹುಪಾಲು ಅಜ್ಞಾತವಾದುದು. ಅವರು ಹುಟ್ಟಿ ಬೆಳೆದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದುದು ಧರ್ಮಕರ್ಮ ಸಂಯೋಗವೆಂದು ಕೆಲವರ ಭಾವನೆ. ಕೆಲವರು ಶ್ರೀಗಳನ್ನು ದೂರದಿಂದಲೂ ಕಾಣುತ್ತಾರೆ. ಇನ್ನು ಕೆಲವರು ಇವರ ಜೀವನವನ್ನು ವಿಮರ್ಶಿಸಿ ದೂರಾಲೋಚನೆ ಮಾಡಿಯೂ ನಿರ್ಧರಿಸುವರು. ನಾನು ಶ್ರೀ ಕ್ಷೇತ್ರದಲ್ಲೇ ವಿದ್ಯಾಭ್ಯಾಸ ಮಾಡಿ ಶ್ರೀಗಳವರ ಸಾನ್ನಿಧ್ಯದಲ್ಲಿದ್ದುಕೊಂಡು ಅವರನ್ನು ಸಾಕ್ಷಾತ್‌ದರ್ಶನ ಮಾಡಿಕೊಂಡವನು. ಆದ್ದರಿಂದ ಅವರ ಪೂರ್ವಾಶ್ರಮ ಹಾಗೂ ಪುನರ್‌ಜನ್ಮದ ಬಗ್ಗೆ ಇರುವ ಅನೇಕ ಕತೆಗಳನ್ನು ಒರೆಗಲ್ಲಿಗೆ ಹಚ್ಚಿ ಸತ್ಯಾನ್ವೇಷಣೆ ಮಾಡಿದ್ದೇನೆ. ಇಲ್ಲಿನ ಕೆಲವು ವಿಷಯಗಳು ಶ್ರೀಗಳವರ ನಿಕಟವರ್ತಿಗಳಿಂದಲೂ, ಸಹಪಾಠಿಗಳಿಂದಲೂ ತಿಳಿದುಬಂದವು. ಹಲವು ಸ್ವಾನುಭಾವದಿಂದ ತಿಳಿದವು. ಆದ್ದರಿಂದ ಇಲ್ಲಿ ಕಟ್ಟುಕತೆಗಳಿಗೂ, ಸಲ್ಲದ ಉತ್ಪ್ರೇಕ್ಷೆಗಳಿಗೂ ಅವಕಾಶವಿತ್ತಿಲ್ಲ.

ಒಟ್ಟಿನಲ್ಲಿ ಶ್ರೀಗಳ ಜೀವನ ಆಧ್ಯಾತ್ಮಮಯ, ತಪೋಮಯ, ಪುರುಷಾಕಾರಮಯ 'ಕಾಯಕವೇ ಕೈಲಾಸ'ವೆಂದು ಶ್ರೀ ಸಿದ್ಧಗಂಗಾ ಕ್ಷೇತ್ರದ ಸರ್ವತೋಮುಖವಾದ ಏಳಿಗೆಗಾಗಿ ಆಧ್ಯಾತ್ಮ, ಶರೀರ ಎರಡನ್ನೂ ಧಾರೆಯೆರೆದ ಜೀವನ್ಮುಕ್ತರು. ವಿದ್ಯಾಭ್ಯಾಸವು ಅಷ್ಟಾಗಿಲ್ಲದಿದ್ದರೂ ಜನ್ಮ ಜನ್ಮಾಂತರದ ತಪೋಮಹಿಮೆಯಿಂದ ಶುದ್ಧಸ್ಫಟಿಕ ಸಂಕಾಶವಾದ ಆತ್ಮಶಕ್ತಿಯಿಂದ ಕಷ್ಟನಿಷ್ಠುರಗಳೆಲ್ಲವನ್ನು ಸದೆಬಡಿದು ಆಜನ್ಮಸಿದ್ಧ ವೀರವಿರಕ್ತಿ ಹಾಗೂ ಶುದ್ಧ ಸಂನ್ಯಾಸದಿಂದ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶದ ಅಡಿಗಲ್ಲಿನ ಮೇಲೆ ಕಟ್ಟಲು ದೈವಪ್ರೇರಿತ ಶಿವಶಿಲ್ಪಿಯಂತೆ ಕ್ಷೇತ್ರದಲ್ಲಿ ನಿಂತರು. ಶ್ರೀಕ್ಷೇತ್ರದಲ್ಲಿ ವಿದ್ಯೆ ಹಾಗೂ ಸಂಸ್ಕೃತಿಗಳ ಸಂಪೂರ್ಣತೆ ಪಡೆದು ಉಳಿದವರಲ್ಲೂ ಅದನ್ನು ರೂಢಿಸಲು ಪ್ರಯತ್ನಿಸಿ ಕ್ಷೇತ್ರದಲ್ಲಿ ನೈತಿಕ ಹಿನ್ನಲೆಯನ್ನು ಬಹುಭದ್ರವಾಗಿ ರೂಪಿಸಲು ಹವಣಿಸಿದರು. ವಿದ್ಯಾದಾನ, ಅನ್ನದಾನಗಳ ನೆಲೆಯ ಮೇಲೆ ಕಾಯಕ ಮಂತ್ರದಿಂದ, ತಪಶ್ಶಕ್ತಿಯಿಂದ ಪುಣ್ಯಕ್ಷೇತ್ರವೆಂದು ಜನಶ್ರುತಿ ಮೊಳಗುವಂತೆ ಮಾಡಿ ಶ್ರೀ ಕ್ಷೇತ್ರಕ್ಕೆ ಸುಭದ್ರ ಅಡಿಪಾಯವನ್ನು ಹಾಕಿದರು. ಇಷ್ಟಾದರೂ ಅಹಂಕಾರ ಇವರನ್ನು ಮುಟ್ಟಲಿಲ್ಲ.

**ಬಾಲ್ಯಜೀವನ :** ಶ್ರೀಕ್ಷೇತ್ರಕ್ಕೆ ಪೂರ್ವದಲ್ಲಿರುವ ದಾಬಸ್‌ಪೇಟೆ ಹತ್ತಿರವಿರುವ ಲಕ್ಕೂರು ಶ್ರೀಗಳ ಜನ್ಮಸ್ಥಳ. ಬಾಲ್ಯದಲ್ಲೇ ಅವರು ಶಿವಪೂಜಾ ದುರಂಧರರಾಗಿದ್ದರು. ಇದನ್ನು ಇಷ್ಟಪಡದ ಅವರ ಮಾತಾಪಿತೃಗಳು ಅವರನ್ನು ಮೇಕೆ ಕಾಯಲು ಕಳುಹಿಸಿದರು. ಏಕಾಂತ ಧ್ಯಾನಕ್ಕೆ ಸದವಕಾಶವನ್ನು ನೀಡುವ ಈ ಕೆಲಸವನ್ನು ಮನಸಾರ ಒಪ್ಪಿದರು. ಸಂತೋಷದಿಂದ ಊರ ಮಗ್ಗುಲಲ್ಲಿರುವ ನಿಜಗಲ್ ದುರ್ಗದಲ್ಲಿ ಮೇಕೆ ಕಾಯುವ ಕಾರ್ಯ ಆರಂಭವಾಯಿತು. ಕ್ರಮೇಣ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರು ಇವರ ಕಿವಿಗೆ ಬಿತ್ತು. ಸಂಸಾರದ ಜಂಗುಳಿಯಿಂದ ಮನಸ್ಸು ರೋಸಿಹೋಗಿತ್ತು. ಗ್ರಾಮ ವಾಸವು ಬೇಸರವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು. ಪೂರ್ವಪುಣ್ಯವಿರಬೇಕು. ನಿಜಗಲ್ ಬೆಟ್ಟದಲ್ಲಿ ಅವರಿಗೆ ಋಷಿ ಸಂಪರ್ಕ ಬೆಳೆದು ಅದರ ಫಲವಾಗಿ ಮಂತ್ರ, ತಂತ್ರ, ಯೋಗಾಭ್ಯಾಸ ಇವುಗಳಲ್ಲಿ ಪೂರ್ಣ ಪರಿಣತಿ ಯುಂಟುಮಾಡಿತು. ದೃಢಕಾಯರೂ ಗುರುಸೇವಾನಿಷ್ಠರೂ ಆಗಿದ್ದ ಇವರಿಗೆ ಶ್ರೀಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಅಡವೀ ಸ್ವಾಮಿಗಳ







ಆಶೀರ್ವಾದವಾಯಿತು. ಬೆಳಕಿಗೆ ಬರುತ್ತಿದ್ದ ಶ್ರೀ ಕ್ಷೇತ್ರದ ದಾಸೋಹಕ್ಕಾಗಿ ಸೌದೆ ತರುವುದು ಕೆಲಸವಾಯಿತು. ಇದುವೆ ಅವರ ಪ್ರತಿದಿನದ ಕಾಯಕ. ಅವಕಾಶ ದೊರೆತಾಗ ತಮ್ಮ ಯೋಗಾಭ್ಯಾಸ ಪ್ರಾಣಾಯಾಮಾದಿಗಳನ್ನು ಮಾಡಿಕೊಳ್ಳುತ್ತಿದ್ದರು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ, ರುದ್ರಪ್ಪನವರು ಹೆಸರಿಗೆ ತಕ್ಕಂತೆ ಉಗ್ರಮೂರ್ತಿ. ಈ ಭಾವ ಪ್ರಾಯಶಃ ಅವರ ಜೀವನದ ಕೊನೆಯ ತನಕವೂ ಇದ್ದಿತು. ಇದರಿಂದಾಗಿ ಅವರ ವ್ಯಕ್ತಿತ್ವ ದಲ್ಲಿ ಕಳೆಯೇರಿತೇ ವಿನಾ ನ್ಯೂನತೆಯುಂಟಾಗಲಿಲ್ಲ.

**ಆಧ್ಯಾತ್ಮ-ಸಸಿ ಮರವಾಯಿತು :** ನಿಜಗಲ್ ಬೆಟ್ಟದಲ್ಲಿ ದೊರೆತ ಮುನಿಸಂಪರ್ಕ ಅವರಲ್ಲಿ ರೂಢಮೂಲವಾಗಿತ್ತು. ಕತ್ತಲಲ್ಲಿ ಸೌದೆಗಾಡಿಗಳನ್ನು ತರುವ ಸಂದರ್ಭದಲ್ಲಿ ರುದ್ರಪ್ಪನವರೇ ದಾರಿ ಕಾಣುವುದಿಲ್ಲವೆಂದಾಗ ಗಾಡಿಯ ಇಕ್ಕೆಲಗಳಲ್ಲೂ ಪಂಜುಗಳು ಗಾಡಿಗಳನ್ನು ಮಠದವರೆಗೂ ಸುಖವಾಗಿ ಒಯ್ಯುತ್ತಿದ್ದವು. ಕೆಲಸದವರಿಗೆ ಯಾವುದಾದರೂ ಖಾಯಿಲೆ ಬಂದಾಗ ರುದ್ರಪ್ಪನವರು ಮಂತ್ರಶಕ್ತಿಯಿಂದ ಅವರನ್ನು ಗುಣಪಡಿಸುತ್ತಿದ್ದರು. ಸ್ವಾಮಿಗಳ ಕೃಪೆ ಇನ್ನೂ ಹೆಚ್ಚಾದರೂ ಅವರನ್ನು ಶ್ರೀಗಳು ಕರೆದು 'ಈಗಲೇ ಈ ಮಾಯ ಮಾಟಗಳನ್ನು ಬಿಟ್ಟುಬಿಡು' ಎಂದು ಆಜ್ಞಾಪಿಸಿ ಅವರಿಂದ ನಮಸ್ಕಾರ ಹಾಕಿಸಿಕೊಂಡರಂತೆ.

**ಅದ್ಭುತ ಬ್ರಹ್ಮರಾಕ್ಷಸ ಘಟನೆ :** ಸಕಲೇಶಪುರದ ತೋಟದ ಗದ್ದೆ ಎಸ್ಟೇಟಿನ ಕಾಫಿ ಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಬ್ರಹ್ಮಾರಾಕ್ಷಸ ಕಾಟ. ಅವರನ್ನು ಸಿದ್ಧಗಂಗೆಗೆ ಬ್ರಹ್ಮರಾಕ್ಷಸನ ಮೋಕ್ಷಕ್ಕಾಗಿ ಕರೆತಂದರು. ಬ್ರಹ್ಮರಾಕ್ಷಸ ಹಿಡಿದ ದೇವಪ್ಪಗೌಡರನ್ನು ಶ್ರೀ ಅಡವೀ ಸ್ವಾಮಿಗಳ ಎದುರಿನಲ್ಲಿ ನಿಲ್ಲಿಸಿದಾಗ ಅವರು 'ಇವನಾರು? ಇವನಲ್ಲ ನನ್ನ ಗುರು, ನನ್ನ ಗುರುವೆಲ್ಲಿ? ಎಂದು ಗರ್ಜಿಸಿ ತಿರುಗುಮುರುಗಾಗಿ ನಿಂತರು. ಸೌದೆ ಗಾಡಿಯನ್ನು ಹೊಡೆದುಕೊಂಡು ರುದ್ರಪ್ಪನವರು ಬರುತ್ತಲೇ 'ಗುರುವೇ! ನನ್ನನ್ನು ಕಾಪಾಡಬೇಕು' ಎಂದು ದೇವಪ್ಪ ಗೌಡರು ರುದ್ರಪ್ಪನವರ ಕಾಲುಗಳನ್ನು ಹಿಡಿದುಕೊಂಡರಂತೆ. ಆಗ ದೇವಪ್ಪಗೌಡರಲ್ಲಿ ಆವಾಹಿತನಾಗಿದ್ದ ಬ್ರಹ್ಮರಾಕ್ಷಸನು ತಮ್ಮಿಬ್ಬರ ಪೂರ್ವಜನ್ಮದ ವೃತ್ತಾಂತವನ್ನು ಹೇಳುವ ಸಂದರ್ಭದಲ್ಲಿ ತಾವೀರ್ವರೂ ಅಲ್ಲಿ ಋಷಿಗಳಾಗಿದ್ದರೆಂದು ಶ್ರೀಗಂಗಾಂಬಿಕೆಯು ದರ್ಶನವಿತ್ತಾಗ ಗೈದ ಒಂದು ಅಪರಾಧಕ್ಕಾಗಿ ತಾನು ಬ್ರಹ್ಮರಾಕ್ಷಸ ಪೀಡೆಗೆ ಬಲಿಯಾದುದಾಗಿಯೂ ಅದು ತಮ್ಮಿಂದ ನಿವಾರಣೆಯಾಗಬೇಕೆಂದೂ ನುಡಿದನು. ಆಗಲೇ ಬ್ರಹ್ಮರಾಕ್ಷಸ ಶ್ರೀ ರುದ್ರಪ್ಪನವರನ್ನು ಹೆಗಲಮೇಲೇರಿಸಿ ಕೊಂಡು ಕ್ಷೇತ್ರದ ಮಗ್ಗುಲಲ್ಲಿರುವ ರಾಮಲಿಂಗದೇವರ ಬೆಟ್ಟದಲ್ಲಿರುವ ಶ್ರೀ ದೊಡ್ಡಸಿದ್ಧಪ್ಪನವರ ಗವಿಗೆ ಹೋಗಿ ಅಲ್ಲಿ ತಾವೀರ್ವರೂ ತಪಸ್ಸು ನಡೆಸಿದ ಸ್ಥಳ ಗುರುತು ಇತ್ಯಾದಿಗಳನ್ನು ತೋರಿಸಿತು. ಇದನ್ನು ಶ್ರೀ ಅಡವೀ ಸ್ವಾಮಿಗಳು ಕಣ್ಣಾರೆ ಕಂಡಿದ್ದುದರಿಂದಲೇ ರುದ್ರಪ್ಪನವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದರು.

**ಮಳೆ ಬಿಟ್ಟರೂ ಮರದ ಹನಿ ಬಿಡಲಿಲ್ಲ :** ಶ್ರೀ ಕ್ಷೇತ್ರದಲ್ಲಿ ರುದ್ರಪ್ಪನವರು ಪ್ರಭಾವಿಗಳಾದರು. ಇತ್ತ ಶ್ರೀ ಅಡವೀ ಸ್ವಾಮಿಗಳ ಅವಸಾನಕಾಲವೂ ಪ್ರಾಪ್ತವಾಗಿ ಅವರು ಹಠಾತ್ತನೆ ತೊಟ್ಟಿಲಕೆರೆಯಲ್ಲಿ ಶಿವೈಕ್ಯರಾದರು. ಬರೀ ಮೈಯಲ್ಲೇ ಅವರ ಸಮಾಧಿ ಕಾರ್ಯಗಳನ್ನು ನೆರವೇರಿಸ ಹೋದ ಶ್ರೀ ರುದ್ರಪ್ಪನವರಿಗೆ ತೊಂದರೆ ಕೊಡುವ ಅನೇಕ ಪ್ರಯತ್ನಗಳು ನಡೆದುವು. ಆದರೆ ದೇಹದಾರ್ಢ್ಯತೆಯುಳ್ಳ ಆ ವ್ಯಕ್ತಿಯ ಎದುರು ವಿರೋಧಿಗಳ ಪ್ರಯತ್ನಗಳು ವಿಫಲವಾದುವು. ಶ್ರೀ ರುದ್ರಪ್ಪನವರು ಬರೀ ಮೈಯಲ್ಲೇ ಸಿದ್ಧಗಂಗೆಗೆ ಹಿಂದಿರುಗಿದರು. ಅಲ್ಲಿ ಅವರು ಶ್ರೀ ಅಡವೀ ಸ್ವಾಮಿಗಳ ತೋರುಗದ್ದಿಗೆಯನ್ನು ರಚಿಸಲು ಪ್ರಯತ್ನಿಸಿ ಅದನ್ನು ಪೂರ್ಣಗೊಳಿಸಿದರು. ಇದನ್ನು ಸಹಿಸದ ಸುತ್ತಮುತ್ತಲಿನ ಜನರು ಕೋಪೋದ್ರಿಕ್ತರಾಗಿ ಶ್ರೀ ಕ್ಷೇತ್ರದಲ್ಲಿನ ದೇವಸ್ಥಾನದ, ಸ್ವಾಮಿವಿಗ್ರಹದ ಕೈಕಾಲು ಮುರಿದು ಬಿಸುಟರು. ರುದ್ರಪ್ಪನವರಿಗೆ ಉತ್ತರಾಧಿಕಾರ ಸಲ್ಲದು ಎಂದು ಹಠ ಹಿಡಿದರು. ಶ್ರೀ ಅಡವೀಸ್ವಾಮಿಗಳು ವಿದ್ಯುಕ್ತವಾಗಿ ಇವರಿಗೆ ಆಶ್ರಮವೀಯದೆ ಶಿವೈಕ್ಯರಾದುದರಿಂದ ಜನರಿಗೆ ದಿಕ್ಕುತೋಚದಂತಾಗಿದ್ದಿತು. ಅಲ್ಲಿಯೂ ಪಕ್ಷಗಳು ಪ್ರಾರಂಭವಾಗಿ ಬಂಡೇಮಠದ ಚರಮೂರ್ತಿಗಳಿಂದ ಶ್ರೀ ರುದ್ರಪ್ಪನವರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತಾರಾಧಿಕಾರ ಕೊಡಿಸಿದರು. ಮೊದಲಿನ ರುದ್ರಪ್ಪ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಅಡವೀಸ್ವಾಮಿಗಳ ಉತ್ತರಾಧಿಕಾರಿಗಳಾದರು. ಅಂದಿನಿಂದ ಅವರು ಶ್ರೀಮನ್ನಿರಂಜನ ಉದ್ದಾನ ಶಿವಯೋಗಿಗಳೆಂದು ಪ್ರಸಿದ್ಧರಾದರು.

ಬಾಲ್ಯಾವಸ್ಥೆಯಿಂದ ಈವರೆಗೆ ಇವರನ್ನು ಎದುರಿಸಿದ ಘಟನೆಗಳೆಲ್ಲ ಇವರ ವೀರವಿರಕ್ತಿ, ಆಧ್ಯಾತ್ಮಿಕ ತೇಜೋವಿಶೇಷ ಮತ್ತು ತಪೋನಿಷ್ಠೆಗಳನ್ನು ಪರಿಸ್ಫುಟಗೊಳಿಸುವ ಘನ ಉದ್ದೇಶದಿಂದಲೇ ನಡೆದುವು. ಆದರೆ ಎಲ್ಲವನ್ನೂ ರೂಪಿಸುವ







ಭವ್ಯಭವಿಷ್ಯದಲ್ಲಿ ಅವೆಲ್ಲವೂ ಬಂದು ಸುಳಿದು ಹೋಗುವ ಅಭ್ರಚ್ಛಾಯೆಯೆಂತೆ ಕಂಡೂ ಕಾಣದಾದವು.

**ಮಠಾಧಿಪತ್ಯದ ಕಠಿಣಪರೀಕ್ಷೆ :** ಮುನಿಗಳಾಗಿದ್ದು ಕಾರಣಪುರುಷರಾಗಿದ್ದರೂ ಸಹ ಮಾನವ ಸಹಜವಾದ ಕಾಠಿಣ್ಯ, ಕಾರ್ಪಣ್ಯಗಳು ಋಷಿಜೀವಿ ಗಳನ್ನು ಬಿಡಲಿಲ್ಲ. ಪಕ್ಷ ವಿಪಕ್ಷ ವಿಪ್ಲವಗಳ ನಡುವೆ ಮಠಾಧಿಪತ್ಯವನ್ನು ವಹಿಸಿಕೊಂಡ ಆದರ್ಶ ಮುನಿವ್ರತಿ ಗಳಾದ ಶ್ರೀ ಉದ್ದಾನಗುರುಗಳನ್ನು ವಿಧಿನಿಯಮಗಳು ಕಾಡತೊಡಗಿದವು. ಅನ್ನದಾನಕ್ಕೆ ಅವಕಾಶವಿಲ್ಲ. ವಿದ್ಯಾದಾನ ಮಾಡಲು ಅನುಕೂಲಗಳಿಲ್ಲ. ಸ್ಥಾನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ, ಎಲ್ಲೆಲ್ಲೂ ವಿಪ್ಲವ. ಮಠಗಳನ್ನೂ ಮಠಾಧಿಪತಿಗಳನ್ನೂ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನೋಡಿ ಅವರ ಆತ್ಮಪರೀಕ್ಷೆ ಮಾಡಿ ನೋಡಬೇಕು. ಗುರುಗಳು ಹಸುಬೆ ಚೀಲವನ್ನು ಹೊತ್ತು ಭಿಕ್ಷೆಗಾಗಿ ಪಾದಯಾತ್ರೆ ಹೊರಟರು. ಮೊದ ಮೊದಲು ಗಣನೆಗೆ ತಾರದ ಜನರಿಂದ 'ಮುಂದಕ್ಕೆ ಹೋಗಿ' ಎನ್ನುವುದನ್ನು ಕೇಳಿಯಾಯ್ತು. ಆದರೆ ಕಾಲಕ್ರಮೇಣ ಆತ್ಮಶಕ್ತಿಗಾಗಿ ಗುರುಕೃಪೆಯು ವಜ್ರಕವಚ ವಾಯಿತು. ಬ್ರಹ್ಮರಾಕ್ಷಸ ಘಟನೆ, ದೆವ್ವಪೀಡೆ-ಉಪಟಳ ಇವುಗಳಿಂದ ಬಿಡುಗಡೆ, ಈ ವಿಚಾರ ಶ್ರೀಗಳವರ ಮಹಿಮಾ ಜೀವನಕ್ಕೆ ಸ್ವಲ್ಪಮಟ್ಟಿಗೆ ಮೊದಮೊದಲು ನೆರವಾದವು. ಅವರ ಆದರ್ಶ, ನಿಗರ್ವ, ಆಚಾರವಿಚಾರ ಇವುಗಳಿಂದಾಗಿ ಬರಬರುತ್ತ ಶ್ರೀ ಸಿದ್ಧಗಂಗಾ ಕ್ಷೇತ್ರವು ಆದರ್ಶ ಪಾವನ ಕ್ಷೇತ್ರವಾಯಿತು. ಶಿವಯೋಗಿಗಳು ಮಹಾಮಹಿಮರಾಗಿ ಕಾಣಿಸತೊಡಗಿದರು. ಆನಂತರ ಶ್ರೀಗಳವರಿಂದ ದಿನೇ ದಿನೇ ರೂಪುಗೊಂಡ ಕಟ್ಟಡ, ಅನ್ನದಾನ, ವಿದ್ಯಾದಾನ, ಅದರ್ಶದ ನೀತಿ ನಿಯಮಗಳು ಜನಮನದಲ್ಲಿ ಅದ್ಭುತ ಪರಿಣಾಮಗಳನ್ನು ಬೀರತೊಡಗಿದುದರ ಕಾರಣವಾಗಿ ಎಲ್ಲರೂ ಭಕ್ತಿಯಿಂದ ನಡೆಯುತ್ತ ನೆರವಾಗತೊಡಗಿದರು. ಅವರ ಆ ಲೋಕೋಪಕಾರಕ ಕಾರ್ಯಗಳು ಅಚ್ಚಳಿಯದ ಶಿಲಾಶಾಸನಗಳಂತಿವೆ. ಧನ, ದವಸ ಮೊದಲಾದವುಗಳ ಅಭಾವ, ತಾನಾಗಿ ಕರಗಿ ಬಹುಧಾನ್ಯ, ಬಹುಧನಗಳಿಗೆ ಅವಕಾಶ ಮಾಡಿಕೊಟ್ಟಿತ್ತು. ಅವರ ಮಹಿಮಾತಿಶಯ. 'ಅದಾನಂ ಹಿ ವಿಸರ್ಗಾಯ' ದಾನಕ್ಕಾಗಿಯೇ ಪರಿಗ್ರಹ, ಇದು ಶ್ರೀ ಸಿದ್ಧಗಂಗಾ ಕ್ಷೇತ್ರದ ಮೂಲಮಂತ್ರ. ಇದರೊಡನೆ ಈವೆರಗೂ ಪರಂಪರೆಯಿಂದ ಅಲ್ಲಿಗೆ ಬಂದಿರುವ ಆದರ್ಶ ಗುರುಮೂರ್ತಿಗಳು ಅದಕ್ಕೆ ತಾರಕಮಂತ್ರವಾಗಿದ್ದಾರೆ.

**ಉತ್ತರಾಧಿಕಾರ :** ತಮ್ಮ ೨೫ನೇ ವಯಸ್ಸಿನಿಂದ ೮೦ ವರ್ಷಗಳ ಕೊನೆಯವರೆಗೂ ಉದ್ದಾನಶಿವಯೋಗಿಗಳು ಅನ್ವರ್ಥನಾಮ ಪಡೆದು ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶ ಕ್ಷೇತ್ರವನ್ನಾಗಿ ಮಾಡಿದರು. ಈ ಸಮಯದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಆಲೇನಹಳ್ಳಿಯಿಂದ ಅಭ್ಯಾಸ ಮಾಡಲು ಬಂದ ಶ್ರೀ ಮರುಳಸಿದ್ಧಯ್ಯ ಎಂಬ ವಟುವು, ಶ್ರೀ ಮರುಳಾರಾಧ್ಯ ಎಂಬ ಹೆಸರಿನಿಂದ ಶ್ರೀ ಉದ್ದಾನ ಶಿವಯೋಗಿಗಳ ಉತ್ತರಾಧಿಕಾರಿಗಳಾದರು. ಸುಮಾರು ಹತ್ತು ವರ್ಷಗಳ ಕಾಲ ವೇದ, ಸಂಸ್ಕೃತಗಳಲ್ಲಿ ಉತ್ತಮ ಪಾಂಡಿತ್ಯ ಪಡೆದು ಉತ್ತಮ ವಾಗ್ಮಿಗಳೂ, ವಾಚಾಳಿಗಳೂ ಆದ ಮರುಳಾರಾಧ್ಯರು ಹಿರಿಯ ಗುರುಗಳಿಗೆ ಮೆಚ್ಚುಗೆಯ ಶಿಷ್ಯರಾದರು.

**ಒಂದು ಕಿವಿ ಮಾತು :** ಒಂದು ಸಂಜೆ ನಡೆದ ಘಟನೆ. ನಾನು ಶ್ರೀ ಕ್ಷೇತ್ರದ ಛತ್ರದಲ್ಲಿ ವಾಸಿಸುತ್ತಿದ್ದೆ. ಶ್ರೀ ಸ್ವಾಮಿಯ ಪೂಜೆಗೆಂದು ಬಿಲ್ವ ಪತ್ರೆಗಳನ್ನು ಎತ್ತುತ್ತಿದ್ದ ನಾನು ಅವನ್ನು ದೇವಸ್ಥಾನಕ್ಕೆ ಕೊಡಲು ಬಹುಶಃ ಬೆಟ್ಟಕ್ಕೆ ಹೋಗುತ್ತಿದ್ದೆ. ಮೇಲಿನಿಂದ ಯಾರೋ ಇಬ್ಬರು ಕಾವಿ ಹೊದ್ದು ತಲೆಯನ್ನು ಮುಚ್ಚಿ ಕೊಂಡು ಪರಸ್ಪರ ಮಾತನಾಡಿಕೊಳ್ಳುತ್ತ ಇಳಿದು ಬರುತ್ತಿದ್ದರು. ಯಾರೋ ಏನೋ ನಾನು ಗಮನಿಸಿರಲಿಲ್ಲ. ಸಮೀಪಿಸಿದಾಗ ಕೇಳಿಬಂದ 'ಹುಂ'ಕಾರದಿಂದ ಇವರು ದೊಡ್ಡ ಶ್ರೀಗಳೇ ಎಂದು ದೃಢವಾಗಿ ಮೈ ಝುಂ ಎಂದಿತು. ಹಿಂದೂ ಹೋಗುವಂತಿಲ್ಲ. ಮುಂದೂ ಹೋಗುವಂತಿಲ್ಲ. ಅಲ್ಲೇ ನಿಂತೆ. ಆ ಉದಾತ್ತ ವ್ಯಕ್ತಿಗಳಿಬ್ಬರೂ ನನ್ನನ್ನು ಮಾತನಾಡಿಸಲೇ ಇಲ್ಲ. ಆದರೆ ಸ್ಪಷ್ಟವಾದ ಕೆಲವು ಮಾತುಗಳು ನನಗೆ ಕೇಳಿಸಿದವು.

"........ ಹಾಗಾದರೆ ಈಗ ಏನಪ್ಪಣೆ? ಬೇಡವೇ? ...... ಏಕೆ ಬೇಡ?

.........ಬಿಟ್ಟು ಬಿಡಲೇನು? ........ ಲೇ ........ ನಿನಗೆ ಬೇಡವಾದರೆ ನನಗೂ ಬೇಡ. ........... ಕರೆದುಕೊಂಡು ಹೋಗು ಹೋಗು'. ಎಂದು ನಮ್ಮ ಗುರುಗಳು ಆಕಾಶಭಾಷಣ ಮಾಡಿದರು.

ಇತ್ತ ಶ್ರೀಮರುಳಾರಾಧ್ಯರು ಶಿವೈಕ್ಯರಾದರು. ಈ ದೈವ ದುರ್ಘಟನೆಯಾಗುವ ವೇಳೆಗೆ ಹತ್ತು ವರ್ಷಗಳ ಕಾಲ ಅವರು ದೊಡ್ಡ ಗುರುಗಳ ಉತ್ತರಾಧಿಕಾರತ್ವದ ಸ್ಥಾನವನ್ನು ಹೊಂದಿದ್ದರು.

ಈ ಘಟನೆ ನಗ್ನಸತ್ಯ. ಆ ಮತ್ತೊಂದು ವ್ಯಕ್ತಿ ಯಾರೆಂಬುದು ಈಗಲು ತಿಳಿಯದ ವಿಚಾರ. ಆದರೆ ಶ್ರೀ ಉದ್ದಾನ ಶಿವಯೋಗಿಗಳು ಮಾನವರಾದರೂ ಅತಿ ಮಾನವರೊಡನೆ ಸಂಪರ್ಕವಿಟ್ಟಿದ್ದರೆಂಬುದು ಲೇಖಕನ ನಂಬಿಕೆ. ಅವರು ಶ್ರೀ ದೊಡ್ಡಸಿದ್ದಪ್ಪ ಮತ್ತು ಚಿಕ್ಕಸಿದ್ದಪ್ಪ ಎಂದು ರಾಮದೇವರ ಬೆಟ್ಟದಲ್ಲಿ ಈಗಲೂ ತಪೋಮಗ್ನ ರಾಗಿರುವ ಮುನಿಪುಂಗವರೆಂದು ಪ್ರತೀತಿ. ಅಲ್ಲದೇ ಅವರು ಬೇತಾಳವನ್ನೂ ವಶಪಡಿಸಿಕೊಂಡಿದ್ದರೆಂದು ಹೇಳುತ್ತಾರೆ. ಆ ಎರಡನೆಯ ವ್ಯಕ್ತಿ ಇವರಲ್ಲಿ ಒಬ್ಬರಿರಬೇಕೆಂದು ಈಗ ಲೇಖಕನ ಅನಿಸಿಕೆ. ಈ ಅತಿಮಾನವ ಸಂಪರ್ಕ ಅವರ ಮುನಿವ್ರತದ ಫಲವೆನ್ನದೆ ತೀರದು. ಕಾರಣ ಪುರುಷರಾಗಿ ಹುಟ್ಟಿ ಬ್ರಹ್ಮರಾಕ್ಷಸ ತಿಳಿಸಿದಂತೆ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಬೆಳಗಲು ಅವರು ದೈವಪ್ರೇರಿತರಾಗಿ ಮಾನವ ಜನ್ಮವನ್ನು ಪಡೆದಿದ್ದರೆಂಬುದು ಒಂದು ವಾದ.

**ಪುನಃ ಉತ್ತರಾಧಿಕಾರಿ :** ೧೯೩೦ರಲ್ಲಿ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಮರುಳಾರಾಧ್ಯರು ಶಿವೈಕ್ಯರಾದ ಮೇಲೆ ಶ್ರೀ ಮನ್ನಿರಂಜನ ಪ್ರಣಾಮ ಸ್ವರೂಪಿ ಉದ್ದಾನಸ್ವಾಮಿಗಳು ಸಮಚಿತ್ತರಂತೆ ಕಂಡುಬಂದರು. ಆ ವರ್ಷದ ಜಾತ್ರೆ ನಡೆಯುವ ಮೊದಲು ಶ್ರೀ ಮರುಳಾರಾಧ್ಯರ ಸಮಾಧಿ ಕಾರ್ಯಗಳು ನಡೆಯುತ್ತಿರುವಾಗ ಹಠಾತ್ತನೆ ಶ್ರೀ ಶಿವಣ್ಣನವರು ಶಿವಗಂಗೆಯ ಹತ್ತಿರದ ವೀರಾಪುರದ ನಿವಾಸಿಗಳು. ಶ್ರೀಗಳು ಅವರನ್ನೇ ತಮ್ಮ ಕೃಪಾಪಾತ್ರ ರಾಗಲು ಅರ್ಹರೆಂದು ದಿವ್ಯದೃಷ್ಟಿಯಿಂದ ಕಂಡಿದ್ದರು. ಶ್ರೀಮರುಳಾರಾಧ್ಯರ ಸಮಾಧಿ ವೇಳೆಯಲ್ಲಿ ಶ್ರೀ ಶಿವಣ್ಣನವರಿಗೆ ಉದ್ದಾನ ಸ್ವಾಮಿಗಳು 'ಶಿವಣ್ಣ! ನಮಸ್ಕಾರ ಹಾಕು' ಎಂದು ಪೂರ್ವ ಸೂಚನೆಯಿಲ್ಲದೆಯೇ ಅಪ್ಪಣೆ ಮಾಡಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ.ಗೆ ವ್ಯಾಸಂಗ ಮಾಡುತ್ತಿದ್ದ ಶ್ರೀ ಶಿವಣ್ಣನವರು ಸಮಾಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಬಂದಿದ್ದರು. ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದ ಅವರು ಶ್ರೀಗಳ ಅಪ್ಪಣೆಯನ್ನು ಪಡೆಯಲು ಅವಕಾಶವಿಲ್ಲದೆ ಒಪ್ಪಬೇಕಾದ ಪರಿಸ್ಥಿತಿಯುಂಟಾಯಿತು. ಮುನಿವ್ರತವೋ. ವೀರ ವಿರಕ್ತಿಯೋ, ಯೋಗಸಿದ್ಧಿಯೋ ಅಂತೂ ಶ್ರೀಗಳ ಅಪ್ಪಣೆಯನ್ನು ಮೀರುವಂತೆಯೇ ಇಲ್ಲ. ಅವರ ಆಜ್ಞೆಯಂತೆ ನಮಸ್ಕಾರ ಮಾಡಿದರು. ಆ ವರ್ಷದ ಜಾತ್ರೆಯಲ್ಲೇ ಅವರ ಆಶ್ರಮ ಸ್ವೀಕಾರ ಜರುಗಿತು. ಸುಮಾರು ೧೧ ವರ್ಷಗಳು ಶ್ರೀ ಮನ್ನಿರಂಜನ ಉದ್ದಾನ ಶಿವಯೋಗಿಗಳ ಮಾರ್ಗದರ್ಶನವು ನೂತನ ಶ್ರೀಗಳಿಗೆ ದೊರಕಿತು. ಶ್ರೀ ಶಿವಣ್ಣನವರು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶಿವಕುಮಾರ ಸ್ವಾಮಿಗಳೆಂಬ ದಿವ್ಯನಾಮಾಂಕಿತ ರಾದರು.

**'ಹರ ತನ್ನ ಭಕ್ತರ ತಿರಿವಂತೆ ಮಾಡುವ;**
**ಒರೆದು ನೋಡುವ ಸುವರ್ಣದ ಚಿನ್ನದಂತೆ,**
**ಅರೆದು ನೋಡುವ ಕಬ್ಬಿನ ಕೋಲಿನಂತೆ;**
**ಅರಿದು ನೋಡುವ ಶ್ರೀಗಂಧದಂತೆ,**
**ಬೆದರದೆ ಬೆಚ್ಚದೆಯಿದ್ದರೆ ಕರವಿಡಿದೆತ್ತಿಕೊಂಬ**
**ರಾಮನಾಥ'**

ಎಂಬಂತೆ ಕೆಲವುಕಾಲ ಕಳೆದ ಮೇಲೆ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿವಕುಮಾರ ಸ್ವಾಮಿಗಳ ಅಧಿಕಾರಾವಧಿ ಯಲ್ಲಿ ಶ್ರೀ ಕ್ಷೇತ್ರದ ಸುವರ್ಣಯುಗವು ಆರಂಭವಾಯಿತು. ಕಾಲವು ಹೇಗೆ ಇರಲಿ, ವಿದ್ಯಾರ್ಥಿಗಳ ಸಂಖ್ಯೆ 100ರಿಂದ ೮೦೦೦ಕ್ಕೇರಿತು. ಅನ್ನದಾನ ಮಿಗಿಲಾಯಿತು. ಮಾಧ್ಯಮಿಕ ಶಾಲೆಗಳು ಪ್ರೌಢಶಾಲೆಗಳು ಈ ಕ್ಷೇತ್ರದಲ್ಲೂ ಕ್ಷೇತ್ರದ ವತಿಯಿಂದ ಬೇರೆ ಬೇರೆ ನಗರ ಗ್ರಾಮಗಳಲ್ಲೂ ಪ್ರಾರಂಭ ವಾದವು. ತುಮಕೂರಿನಲ್ಲಿ ಒಂದು ಸೈನ್ಸ್ ಕಾಲೇಜು, ಅದಕ್ಕೂ ಮಿಗಿಲಾಗಿ ಒಂದು ಇಂಜಿನಿಯರಿಂಗ್ ಕಾಲೇಜು ಸಹ ಪ್ರಾರಂಭವಾಯಿತು. ದೇಶ ಆಹಾರ ಧಾನ್ಯಗಳ ವಿಷಯ ದಲ್ಲಿ ಕಷ್ಟಕ್ಕೆ ಗುರಿಯಾಗಿದ್ದರೂ ಶ್ರೀ ಶಿವಕುಮಾರ ಸ್ವಾಮಿಗಳ ಕ್ಷೇತ್ರಾಭಿವೃದ್ಧಿ ಕಾರ್ಯಕ್ರಮಗಳಿಗೆ ಯಾವುದೇ ರೀತಿಯ ಅಡೆತಡೆಯುಂಟಾಗಲಿಲ್ಲ. ಶ್ರೀಗಳವರ ಪ್ರಭಾವ ಪ್ರತಿಭೆಗಳು ದೇಶದ ಸಾಮಾಜಿಕ ವಿಷಯಗಳಲ್ಲಿ ಪ್ರವೇಶಮಾಡಿ ಅವರ ಅಭ್ಯುದಯಕ್ಕಾಗಿ ದಾರಿ ಮಾಡಿದವು. ಒಟ್ಟಿನಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸುವರ್ಣ ಯುಗವನ್ನು ಪ್ರಾರಂಭಿಸಿ ಅಭಿವೃದ್ಧಿಗೊಳಿಸಿದರು. ಒಂದು ಮಾತಿನಲ್ಲಿ ಹೇಳುವುದಾದರೆ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಶಿವಕುಮಾರ ಸ್ವಾಮಿಗಳನ್ನು ಪೂಜೆಗೆ ಬಿನ್ನಹ ಹಾಕುವುದು, ಭಾಷಣಕ್ಕೆ ಆಹ್ವಾನಿಸುವುದು ಇತ್ಯಾದಿಗಳೆಲ್ಲ ಜನಸ್ತೋಮಕ್ಕೆ ಒಂದು ಹೆಮ್ಮೆಯ ಕೆಲಸವಾಯಿತು. ವೀರವಿರಕ್ತರೂ ಶಾಂತಿ ಸಾಗರರೂ ಆದ ಶ್ರೀಗಳು ಎಲ್ಲವನ್ನೂ ಸಮದೃಷ್ಟಿಯಲ್ಲಿ ನೋಡಿ ತಮ್ಮ ಭಾಷಣದಲ್ಲಿ ಕೀರ್ತಿ ಪಡೆದರು, ಯಾವ ನ್ಯೂನತೆಗೂ ಹೆದರಿ ಪರರನ್ನು ಬೇಡಿಲ್ಲ. ಯಾರನ್ನೂ ಬೇಡದಂತೆ ಶ್ರೀ ಗುರು ಅವರಿಗೆ ಅಭಯಹಸ್ತ ನೀಡಿದ್ದಾನೆ.



**ಆಚರಣೆ**

# ಹಲವು ವೈಶಿಷ್ಟ್ಯಗಳ ಹಬ್ಬ ಸಂಕ್ರಾಂತಿ

- ವಿದ್ಯಾವಾಚಸ್ಪತಿ ಕವಿತಾಕೃಷ್ಣ *

**ಸೂರ್ಯದೇವನು** ವಿಶ್ವದ ಆತ್ಮ; ಜಗತ್ತಿನ ಕಣ್ಣು. ಈತನ ಕೃಪೆಯಿಂದಲೆ ಇಳೆ ಬೆಳಗುವುದು ಸುರಿಯುವುದು, ಬೆಳೆ ಬೆಳೆಯುವುದು, ಚೈತನ್ಯ ಮೊಳೆಯುವುದು. ಸೂರ್ಯನು ೧೨ ತಿಂಗಳುಗಳಲ್ಲಿ ೧೨ ರಾಶಿಗಳನ್ನು ಪ್ರವೇಶಿಸುವನು. ಈ ಹನ್ನೆರಡು ತಿಂಗಳುಗಳನ್ನು ಉತ್ತರ ಆಯನ, ದಕ್ಷಿಣ ಆಯನ, ಎಂದು ಎರಡು ಭಾಗವಾಗಿ ವಿಂಗಡಿಸಲಾಗಿದೆ. ಸೂರ್ಯನು ಉತ್ತರಾಯಣ ಕಾಲದಲ್ಲಿ ಮಕರ ರಾಶಿಯನ್ನು ಪ್ರವೇಶಿಸುವನು. ಇದೊಂದು ಹಬ್ಬವಾಗಿ ರೂಪುಗೊಂಡಿದೆ. ಮಕರಸಂಕ್ರಾಂತಿ ಅಥವಾ ಸಂಕ್ರಾಂತಿ ಹಬ್ಬವೆಂದು ಪ್ರಸಿದ್ಧವಾಗಿದೆ.

ಸಂಕ್ರಾಂತಿ ಭಾರತೀಯರ ಪ್ರಮುಖ ಹಬ್ಬ. ಕೃಷಿಕರಿಗಂತೂ ದೊಡ್ಡ ಹಬ್ಬ. ಸುಗ್ಗಿಯ ಕಾಲದಲ್ಲಿ ಬರುವ ಹಿಗ್ಗಿನ ಹಬ್ಬ ಇದಾಗಿದೆ. ಸೂರ್ಯ ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಚಲಿಸುವುದನ್ನು ಚಲನೆಯಿಂದಾಗುವ ಮಹತ್ವದ ಪರಿವರ್ತನೆಗಳನ್ನು ಗಮನಿಸಿ ಅದನ್ನು ಸಂಕ್ರಾಂತಿಯೆಂದು ಕರೆದರು, ಗೌರವಿಸಿದರು. ಋಷಿ ಜೀವನದ ತಳಹದಿಯ ಮೇಲೆ ರೂಪುಗೊಂಡ ನಮ್ಮ ಸಂಸ್ಕೃತಿ ಆ ದಿನವನ್ನು ಪವಿತ್ರ ದಿನವೆಂದು ನಂಬಿತು. ಏಕಕಾಲದಲ್ಲಿ ಸೂರ್ಯ, ಪಶು, ಪಸಲುಗಳ ಪೂಜೆ ಮಾಡಿತು. ಸಂಕ್ರಾಂತಿಯು ಸೂರ್ಯದೇವನ ಹಬ್ಬವೂ ಹೌದು, ದನಕರುಗಳನ್ನು ಪೂಜಿಸುವ ಹಬ್ಬವೂ ಹೌದು. ಒಡಲು ತುಂಬುವ ಬೆಳೆಗಳ ಪೂಜಿಸುವ ಹಬ್ಬವೂ ಹೌದು.



**ರೈತರ ಹಬ್ಬ :** ನೇಗಿಲ ಯೋಗಿಯು ಬೆವರು ಸುರಿಸಿ, ಇಡೀ ವರ್ಷ ದುಡಿದುದಕ್ಕೆ ಪ್ರತಿಫಲವಾಗಿ ಕಣಜ ತುಂಬುವ ಸಮಯದಲ್ಲಿ ಈ ಸಂಕ್ರಾಂತಿ ಹಬ್ಬ ಬರುತ್ತದೆ. ಜನ, ದನ ಈರ್ವರೂ ಸಂತೃಪ್ತಿಗೊಂಡ ಕಾಲವದು. ಮನೆ ತುಂಬಾ ದವಸ-ಧಾನ್ಯ ಕಾಳು ಕಡ್ಡಿ, ಹಿತ್ತಲಲ್ಲಿ ಹುಲ್ಲಿನ ಬಣವೆ, ಜನರು ಅಂದು ಪುಣ್ಯ ಜಲಗಳಲ್ಲಿ ಮಿಂದು ಮಡಿಯಾಗುತ್ತಾರೆ. ಹೊಸ ಬಟ್ಟೆ ಧರಿಸುತ್ತಾರೆ. ಮನೆಯನ್ನು ಹಿಂದಿನ ದಿನವೇ ಗುಡಿಸಿ ಸಾರಿಸಿ ಶುಚಿ ಮಾಡಿಟ್ಟುಕೊಳ್ಳುತ್ತಾರೆ. ಮಾರನೆಯ ದಿವಸ ಮನೆಯ ಮುಂದೆ ರಂಗವಲ್ಲಿ ಬಿಟ್ಟು, ಹೂಮಾಲೆ ಇಳಿಬಿಟ್ಟು ತಳಿರು ತೋರಣಗಳಿಂದ ಅಲಂಕರಿಸಿರುತ್ತಾರೆ. ನೆರೆ-ಹೊರೆಯ ಮಂದಿಗೆ, ಬಂಧು-ಬಾಂಧವರಿಗೆ ಪೂಜಾ ನಂತರ ಎಳ್ಳು-ಬೆಲ್ಲ ಕಬ್ಬು-ಬಾಳೆಹಣ್ಣು ಹಂಚುತ್ತಾರೆ. ನಡೆ-ನುಡಿಯನ್ನು ಮಡಿ ಮಾಡುವ ಸಂಕೇತವೂ ಇದಾಗಿದೆ. ಪೂಜಿಸಿದ ಆನಂತರ ಬೇಯಿಸಿದ ಗೆಣಸು, ಕಡಲೆಕಾಯಿ ಮತ್ತು ಸಿಹಿ ಪೊಂಗಲ್ ಅರ್ಪಿಸಿ, ತಾವೇ ತಿನ್ನಿಸುತ್ತಾರೆ. ಹೆಣ್ಣುಮಕ್ಕಳು ಬಹು ಭಕ್ತಿಯಿಂದ ಗೋಪೂಜೆ ಸಲ್ಲಿಸುತ್ತಾರೆ. ಗಂಡಸರು ಅಲಂಕೃತ ಹಸು, ಕರು, ಹೋರಿಗಳನ್ನು ವಾದ್ಯದೊಂದಿಗೆ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ. ಕಿಚ್ಚು ಹಾಯಿಸುವುದು ರೂಢಿಯಲ್ಲಿದೆ.

ರೈತರು ಅಂದು ತಾವು ಮಡಿಯಾಗುವಂತೆಯೇ ದನಕರುಗಳನ್ನು ಮೈ ತೊಳೆದು ಮಡಿ ಮಾಡುತ್ತಾರೆ. ಕೊಂಬುಗಳಿಗೆ ಬಣ್ಣ ಬಳಿಯುತ್ತಾರೆ. ಕೊರಳಿಗೆ ಹೂ ಸುತ್ತುತ್ತಾರೆ. ನಾಲ್ಕು ಪಾದಗಳಿಗೂ, ತಲೆ, ಬಾಲಗಳಿಗೂ ಅರಿಶಿನ-ಕುಂಕುಮವನ್ನಿಟ್ಟು ಕಡ್ಡಿ ಕರ್ಪೂರ ಹಚ್ಚಿ ಮೆರವಣಿಗೆಯ ನಂತರ ಉರಿಯುವ ಬೆಂಕಿಯಲ್ಲಿ ಹಸು, ಕರು, ಹೋರಿಗಳನ್ನು ಹಾರಿಸುತ್ತಾರೆ. ಈ ಪದ್ಧತಿಯನ್ನು **'ಕಿಚ್ಚು ಹಾಯಿಸುವುದು'** ಎಂದು ಕರೆಯುತ್ತಾರೆ. ಊರು, ಹಳ್ಳಿಗಳಲ್ಲಿ ಈ ಕಿಚ್ಚು ಹಾಯಿಸುವ ನೋಟ ಬಲು

* ಕಾವೇರಿ ರಸ್ತೆ, ಚಂದ್ರಮೌಳೀಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು-572 104









ಮನೋಹರವಾಗಿರುತ್ತದೆ. ಅಲ್ಲಿ ಊರಿನ ಮಂದಿಯೆಲ್ಲಾ ಸೇರಿರುತ್ತಾರೆ. ತಮ್ಮ ತಮ್ಮ ರಾಸುಗಳನ್ನು ಓಡದು ತಂದಿರುತ್ತಾರೆ. ಮೋಜಿನಿಂದ ಸಂಜೆಯ ವೇಳೆಯನ್ನು ಕಳೆಯುತ್ತಾರೆ. ಸಂಕ್ರಾಂತಿ ಕೃಷಿಕರೊಂದಿಗೆ ಅವಿನಾಭಾವ ಬಾಂಧವ್ಯವನ್ನು ಬೆಸೆದುಕೊಂಡಿದೆ. ಸಂಕ್ರಾಂತಿ ಹಬ್ಬ ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಹಾಗೂ ವೈಶಿಷ್ಟ್ಯಪೂರ್ಣವಾಗಿ ಆಚರಿಸಲ್ಪಡುತ್ತದೆ.

**ಪೊಂಗಲ್ ಹಬ್ಬ :** ಮಾನವ ಮಡಿಯಾಗಿ, ಶುಚಿ-ರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಉಣ್ಣುವುದು ಮಕರ ಸಂಕ್ರಾಂತಿ ವೈಶಿಷ್ಟ್ಯವಾಗಿದೆ. ಅಂದು ಅಕ್ಕಿ, ಬೆಲ್ಲ, ದ್ರಾಕ್ಷಿ, ಬಾದಾಮಿ, ಗೋಡಂಬಿ, ತೆಂಗು, ಕೊಬ್ಬರು, ತುಪ್ಪ, ಏಲಕ್ಕಿ ಮುಂತಾದವುಗಳನ್ನು ಬಳಸಿ ಸಿಹಿ ಪೊಂಗಲ್ ಮಾಡುತ್ತಾರೆ. ಅದನ್ನು ದೇವರಿಗಿಟ್ಟು ಪೂಜಿಸುತ್ತಾರೆ. ನಂತರ ದನಕರುಗಳಿಗಿಟ್ಟು ಉಣ ಬಡಿಸುತ್ತಾರೆ. ಆನಂತರ ಅನ್ಯರಿಗಿಟ್ಟು, ತಾವು ಉಂಡು ಸುಖಿಸುತ್ತಾರೆ.



ಸಿಹಿಪೊಂಗಲ್ ಜೊತೆಯಲ್ಲಿಯೇ ಖಾರ ಪೊಂಗಲ್ ಮಾಡುತ್ತಾರೆ.

ಆಂಧ್ರದಲ್ಲಿ ಬಹುದೊಡ್ಡ ಹಬ್ಬವಾಗಿ ಆಚರಿಸಲ್ಪಡುತ್ತದೆ. ಇವರು 'ಪೆದ್ದ ಪಂಡಗ' ಎಂದು ಕರೆಯುತ್ತಾರೆ. ಇದು ಹಾಡು ಕುಣಿತಗಳೊಂದಿಗೆ ನಡೆವ ಮೂರು ದಿನದ ಸಾಂಪ್ರದಾಯಿಕ ಹಬ್ಬವಾಗಿದೆ. ಆಂಧ್ರ ಪ್ರದೇಶದಲ್ಲಿ 'ಗೊಬ್ಬಿ ಪಾಟಲು' (ಗೋಪಿ ಹಾಡು) 'ಪೆದ್ದಪಂಡಗ' ಎಂದು ಕರೆಯುತ್ತಾರೆ. ಅಂದು ಪುಟ್ಟ ಮಕ್ಕಳಿಗೆ ಆರತಿ ಎತ್ತುವ ಸಂಪ್ರದಾಯವೂ ಕೂಡ ಆಚರಣೆಯಲ್ಲಿದೆ. ಭಗವಾನ್ ಶ್ರೀ ಕೃಷ್ಣನು ತನ್ನ ಕಾಲದಲ್ಲಿ ಆಚರಣೆಯಲ್ಲಿದ್ದ ಇಂದ್ರ ಪೂಜೆಯನ್ನು ನಿಲ್ಲಿಸಿ, ಗೋಪೂಜೆಗೆ ನಾಂದಿ ಹಾಡಿದನಂತೆ. ಗೋವು ಮಹತ್ವವಾದ ಸಂಪತ್ತಾಗಿ ಪರಿಣಮಿಸಿತು. ಅಂದು ಮೊದಾ ಪೂಜೆಯನ್ನು ಶ್ರೀಕೃಷ್ಣನೇ ಮಾಡಿದನಂತೆ. ಕೃಷ್ಣನು ಗೋವಳರ ಆಚರಣೆಯಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿ, ಸಂಕ್ರಾಂತಿ ಹಬ್ಬವಾಗಿ ರೂಪಿಸಿದನು. ಹೀಗಾಗಿ ಸಂಕ್ರಾಂತಿಗೆ ಪ್ರಾಚೀನ ಐತಿಹ್ಯವೇ ಇದೆ. ಸಂಕ್ರಾಂತಿ ಹಬ್ಬವನ್ನು ನಾವುಗಳು ಪರಿ ಪೂರ್ಣವಾಗಿ ಆಚರಿಸೋಣ. ಋತುಮಾನ ಧರ್ಮಕ್ಕೆ ಪೂರಕವಾಗಿ ಸ್ಪಂದಿಸೋಣ. ಪುರಾತನ ಪರಂಪರೆಯನ್ನು ಆದರಿಸೋಣ

**ಸುಗ್ಗಿಯ ಕಾಲದಿ ಹಿಗ್ಗನು ತಂದಿತು**
**ಸಿರಿವಂತಿಕೆಯ ಸಂಕ್ರಾಂತಿ**
**ಜನಮನ ತಣಿಸಿ ಹೃನ್ಮನ ಅರಳಿಸಿ**
**ತಂದಿತು ಅದು ಸುಖಿಶಾಂತಿ**
**ಎಳ್ಳು-ಬೆಲ್ಲ, ಕಡಲೆ-ಕಬ್ಬು,**
**ಪೊಂಗಲ್ ಉಣಿಸಿದ ಸಂಕ್ರಮಣ.**
**ಸೂರ್ಯನ ಪೂಜಿಸಿ ಗೋವಿಗೆ ನಮಿಸುವ**
**ಸಂಸ್ಕೃತಿ ಹಿರಿಮೆ.**

ಸುಗ್ಗಿಯ ಕಾಲದಲ್ಲಿ ಹಿಗ್ಗಿನೊಂದಿಗೆ ಬರುವ 'ಸಂಕ್ರಾಂತಿ ಹಬ್ಬ' ಪರಂಪರಾಗತವಾಗಿ ಆಚರಿಸುವ ಹಬ್ಬಗಳಲ್ಲಿ ಇದು ಪ್ರಮುಖವಾಗಿದೆ. ಭಾರತೀಯರ ಆರಾಧ್ಯದೈವ ಎನಿಸಿದ ಸೂರ್ಯದೇವನು ಅಂದು ತನ್ನ ಚಲನಪಥವನ್ನು ಬದಲಿಸುತ್ತಾನೆ. ಆತ ದಕ್ಷಿಣ ಆಯನದಿಂದ ಉತ್ತರ ಆಯನದತ್ತ ಚಲಿಸಲು ಆರಂಭಿಸುತ್ತಾನೆ. ಇದೊಂದು ಪುಣ್ಯಕಾಲವೆಂದು ಧರ್ಮಿಯರು ಭಾವಿಸಿದ್ದಾರೆ. ಹೀಗಾಗಿ ಸಂಕ್ರಾಂತಿಯನ್ನು ಉತ್ತರಾಯಣ ಪುಣ್ಯಕಾಲದ ಪ್ರಾರಂಭಿಕ ದಿನವೆಂದು ಗೌರವಿಸುತ್ತಾರೆ.

**ಎಳ್ಳು-ಬೆಲ್ಲದ ಹಬ್ಬ :** 'ಎಳ್ಳು ಬೆಲ್ಲ ತಿಂದು, ಒಳ್ಳೆಯ ಮಾತಾಡು' ಎಂಬ ನಾಣ್ಣುಡಿ ನಾಡಿನಲ್ಲಿ ಇಂದಿಗೂ ಪ್ರಚಲಿತದಲ್ಲಿದೆ. ಸಂಕ್ರಾಂತಿಯ ಎಳ್ಳಿಗೆ ತುಂಬಾ ಮಹತ್ವ ನೀಡಿದೆ. ಎಳ್ಳನ್ನು ಸಂಸ್ಕಾರವಾಡಿ ಪರಿಶುದ್ಧ ಗೊಳಿಸುತ್ತಾರೆ. ಅದನ್ನು ಹದವಾಗಿ ಉರಿಯುತ್ತಾರೆ. ನಂತರ ಕೊಬ್ಬರಿ ಚೂರು, ಚೂರು ಬೆಲ್ಲ, ಕಡಲೆಕಾಯಿ ಬೀಜ, ಹುರಿಗಡಲೆ, ಏಲಕ್ಕಿ ಸಮ ಪ್ರಮಾಣದಲ್ಲಿ ಬೆರೆಸುತ್ತಾರೆ. ಬಿಸಿಲಿನಲ್ಲಿಟ್ಟು ಚೆನ್ನಾಗಿ ಒಣಗಿಸುತ್ತಾರೆ. ಇದರೊಂದಿಗೆ ಬಣ್ಣ ಬಣ್ಣದ, ವಿವಿಧ ಆಕಾರಗಳ ಸಕ್ಕರೆ ಚೂರು, ಕಲ್ಯಾಣ ಸೇವೆ ಸೇರಿಸುತ್ತಾರೆ. ಜೀರಿಗೆಯುಕ್ತ ಪೆಪ್ಪರ್‌ಮೆಂಟ್ ಸಹ ಸೇರಿಸುತ್ತಾರೆ. ಹಬ್ಬದ ದಿನ ಎಳ್ಳು ಬೆಲ್ಲದ ಮಿಶ್ರಣದೊಂದಿಗೆ ಕಬ್ಬಿನ ಚೂರು, ಬಾಳೆಯ ಹಣ್ಣಿನ ಜೊತೆ ಇಟ್ಟು ಮನೆ ಮನೆಗೆ ಹೋಗಿ ಹೆಂಗಸರು ಮಕ್ಕಳು ಹಂಚುತ್ತಾರೆ. ಹೊಸಹೊಸ ಬಟ್ಟೆ ಧರಿಸಿ, ಸಿಂಗಾರ ಮಾಡಿಕೊಂಡ ಹೆಂಗಸರು, ಮಕ್ಕಳು ಎಳ್ಳು-ಬೆಲ್ಲ ಹಂಚುವಲ್ಲಿ ಹೆಚ್ಚು ಸಡಗರ ತೋರುತ್ತಾರೆ.







ಶಿಶಿರದ ಕರಕರ ಕೊರೆವ ಚಳಿಗಾಲಕ್ಕೆ ಒಡಲಿಗೆ ಎಳ್ಳು ಹಿತ. ಹಾಗೆಯೇ ಎಳ್ಳಿನ ಎಣ್ಣೆಯ ಸ್ನಾನವೂ ಹಿತ. ಸಿಹಿಪೊಂಗಲ್-ಖಾರಪೊಂಗಲ್ ಕೂಡ ಒಳ್ಳೆಯ ಅನ್ನಾಂಗಗಳ ಆಹಾರ. ಇವೆಲ್ಲ ಚಳಿಗಾಲದಲ್ಲಿ ಪಚನಶಕ್ತಿ ಹೆಚ್ಚಿಸುತ್ತವೆ.

**ಸ್ನಾನದ ಹಬ್ಬ :** ಈ ಮಾಸದಲ್ಲಿ ಉದಯಕಾಲದ ಸ್ನಾನ ಮಂಗಳಕರ. ಆಗ ಕೆರೆ, ಕಟ್ಟೆ, ನದಿ, ನದಿಗಳ ಸಂಗಮ ಜಾಗಗಳಲ್ಲಿ ಮಂಗಳಸ್ನಾನ ಮಾಡುತ್ತಾರೆ. 'ಕುಂಭಮೇಳ' ಬಹು ಪ್ರಸಿದ್ಧಿಯಾಗಿದೆ. ವಿವಿಧ ರಾಜ್ಯಗಳಲ್ಲಿ ಕುಂಭಮೇಳ ಜರುಗುತ್ತದೆ. ಜನ ಒಗ್ಗೂಡಿ ಪಾಲುಗೊಳ್ಳುತ್ತಾರೆ.

ಒಟ್ಟಾರೆ ಸಂಕ್ರಾಂತಿ ರೈತರ ಹಬ್ಬ. ಸುಗ್ಗಿಯ ಕಾಲದಲ್ಲಿ ಬರುವ ಹಬ್ಬ, ಮೈಮನ ಮಡಿ ಮಾಡುವ ಸಂಭ್ರಮದ ಹಬ್ಬವಾಗಿದೆ. ■

## ಅದೇ ಎನ್ನ ಮಾತೃಭೂಮಿ

೧
ಯಾವ ಯೋಗಿ ಪಾದದಿಂದ
ಉದಿಸಿ ಬಂದ ಗಂಗೆ ತಾನು
ಪಾಪ ತೊಳೆವ ತೀರ್ಥವಾಗಿ
ಯಾವ ನೆಲದಿ ನಿಂದಲೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೨
ಎಲ್ಲಿ ಸಿದ್ಧರೆಲ್ಲ ತಾವು
ಜನರ ಹರಸೆ ಬಂದು ನಿಂದು
ಸಿದ್ಧಗಂಗೆ ಎಂದು ಕರೆದು
ಎಲ್ಲಿ ತಪಕೆ ನಿಂತರೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೩
ಎಲ್ಲಿ ಭಕುತ ರೆಲ್ಲ ಬಂದು
ತಮ್ಮ ಪಾಪ ತೊಳೆಯ ಲೆಂದು
ಮಿಂದು ಸುಖದಿ ಶಿವನ ನೋಡಿ
ಎಲ್ಲಿ ಮುದದಿ ನಲಿವರೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೪
ಯಾವ ನೆಲದಿ ಸೇವೆ ತಾನು
ದಿವ್ಯ ರೂಪ ತಾಳಿ ಬಂದು
ಯಾವ ಧರೆಗೆ ಭಕುತಿ ವರುಷ
ಸುರಿದು ಹರುಷ ತಂದಿತೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೫
ಎಲ್ಲಿ ದಾಸ ಭಾವ ನಿಂತು
ಜನರ ಹಸಿವು ಹಿಂಗಿ ಹೋಗಿ
ಧನ್ಯ ಭಾವ ಉದಿಸಿ ಬಂದು
ಎಲ್ಲಿ ಎದ್ದು ಮೊಳಗಿತೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೬
ಎಲ್ಲಿ ಜನರು ಉಂಡು ತೇಗಿ
ಶಿವನು ಧರೆಗೆ ಇಳಿದು ಬಂದ
ನೆಂದು ತಿಳಿದು ನಮಿಸಿ ತಾವು
ಧನ್ಯ ಭಾವ ಪಡೆವರೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೭
ಎಲ್ಲಿ ಛಾತ್ರರೆಲ್ಲ ಒಂದೆ
ಪಂಥರಾಗಿ ಬೆಳೆದು ಬಳೆದು
ಎಲ್ಲಿ ಶರಣ ನುಡಿಯು ತಾನು
ದಿವ್ಯ ಮಂತ್ರ ವಾಯಿತೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

೮
ಯಾವ ನೆಲದಿ ಶಿವನ ಮಗನ
ಧವಳ ಕೀರ್ತಿ ಬೆಳಗಿ ತೋರಿ
ಬಸವ ವಾಣಿ ದಿವ್ಯವಾಗಿ
ಎಲ್ಲಿ ಬೆಳಕು ಚೆಲ್ಲಿತೋ
ಅದೇ ಎನ್ನ ಬಸವ ಭೂಮಿ
ಅದೇ ಎನ್ನ ಮಾತೃ ಭೂಮಿ

– ಕೋ.ರಂ. ಬಸವರಾಜು
* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

ಅಡಿ ಟಿಪ್ಪಣಿ :
ಪದ್ಯ ೧ : ಯಾವ ಯೋಗಿ ಪಾದದಿಂದ= ಗೋಸಲಸಿದ್ಧೇಶ್ವರರ ಪಾದದಿಂದ
ಪದ್ಯ ೨ : ಛಾತ್ರರೆಲ್ಲ =ವಿದ್ಯಾರ್ಥಿಗಳೆಲ್ಲ, ಬೆಳೆದು=ದೊಡ್ಡವರಾಗಿ ಬಳೆದು=ಅಭಿವೃದ್ಧಿಹೊಂದಿ.







ಲೇಖನ

# ಸಿದ್ಧರಾಮನ ಸಾಮಾಜಿಕ ವೈಚಾರಿಕ ಚಿಂತನೆಗಳು

**– ಸುಶೀಲಾ ಸದಾಶಿವಯ್ಯ ***

ಸೊನ್ನಲಿಗೆಯ ಸಿದ್ಧರಾಮ 'ಸಿದ್ಧಕುಲ ತಿಲಕ' 'ಕಮಲ ರವಿ,' 'ಯೋಗಿ ಶ್ರೇಷ್ಠ' ಮಹಾನ್ ಸಂತನಾಗಿ ಕಲ್ಯಾಣದ ಶರಣರ ಅಗ್ರ ಪಂಕ್ತಿಯಲ್ಲಿ ಕಂಗೊಳಿಸಿದವರು. ಭಕ್ತನಾಗಿ, ವಚನಕಾರನಾಗಿ, ಸಮಾಜ ಸೇವಕನಾಗಿ, ಸರ್ವ ಸಂಗ ಪರಿತ್ಯಾಗಿ, ಕಾಯಕ ಯೋಗಿಯಾಗಿ **'ಶಿವಯೋಗಿಯ ಶರೀರ ವೃಥಾ ಸವೆಯಲಾಗದು ಅನಿತು ಕಾಯಕಂ ನಡೆಯುತ್ತಿರಬೇಕು'** ಎಂದು ಅನುದಿನವು ಕಾಯಕ ನಿರತನಾಗಿ ಸಮಾಜಾಭಿವೃದ್ಧಿ ಕೆಲಸಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದರು. 'ಜೀವನದಲ್ಲಿ ಕುಳಿತು ಕೊಳೆಯುವುದಕ್ಕಿಂತ. ದುಡಿದು ಸವಿಯುವುದೇ ಮೇಲು' ಎಂಬಂತೆ ಸಿದ್ಧರಾಮ ಎಲ್ಲಾ ಶರಣರಿಗಿಂತ ಭಿನ್ನವಾಗಿ ಅಪೂರ್ವ ಸಿದ್ಧಾಂತ ಪಾಲಕನಾಗಿ ತನ್ನ ಸಮಾಜಕ್ಕೆ ತನ್ನದೇ ಆದ ಅಭಿವೃದ್ಧಿ ಕಾರ್ಯಗಳನ್ನು ಮಾಡಬೇಕು ಎಂದು ಬಯಸಿ, ತನ್ನ ಆಯುಷ್ಯದ ಸರ್ವ ಜೀವನವನ್ನು ಅದಕ್ಕಾಗಿಯೇ ಮೀಸಲಿಟ್ಟು, ಸಮಾಜದ ಅಭಿವೃದ್ಧಿಗಾಗಿ ತನ್ನ ತನು-ಮನ- ಧನವನ್ನು ವಿನಿಯೋಗಿಸಿ ತನ್ನ ಉದಾತ್ತ ಮಾನವ ಜನ್ಮವನ್ನು ಸಾರ್ಥಕಗೊಳಿಸಿಕೊಂಡ ಮಹಾನ್ ಶರಣ. ತನ್ನ ಬದುಕಿನ ಪೂವಾರ್ಧ ಭಾಗವನ್ನು ಲೋಕದ ಹಿತಕ್ಕಾಗಿಯೇ ದುಡಿದ ಸಾಮಾಜಿಕ ಕಾಳಜಿಯುಳ್ಳ ಚಿಂತಕ.

ನಮ್ಮ ಶರಣರ ಜೀವನ ಸಂದೇಶ, ತತ್ತ್ವ ಸಿದ್ಧಾಂತಗಳಿರವುದೇ **'ಸಕಲ ಜೀವಾವಳಿಗಳಿಗೆ ಲೇಸನೆ ಬಯಸುವ'** ಮಾನವೀಯವಾದ ಚಿಂತನೆ. **'ತನ್ನಂತೆ ಪರರ ಬಗೆವೊಡೆ ಕೈಲಾಸ ಬಿನ್ನಾಣವಕ್ಕು'** ಎನ್ನುವ ಬಸವಣ್ಣನ ನುಡಿಯಂತೆ, ಇರುವ ಸಕಲ ಜೀವಿಗಳನ್ನು ತನ್ನಂತೆಯೇ ಭಾವಿಸುವುದು, ನಡೆ ನುಡಿಯಲ್ಲಿ ಶುದ್ಧವಾಗಿ ಸಮಾನ ಮಾನವೀಯ ನೆಲೆಯಲ್ಲಿ ನಮ್ಮೊಂದಿಗೆ ನೋಡಿದ ಶರಣರ ಜೀವನ ಅನುಕರಣೀಯವಾದದ್ದು. ಅದರಲ್ಲೂ ಸಿದ್ಧರಾಮನ ಜೀವಪರವಾದ ಕಾಳಜಿ, ಸಾಮಾಜಿಕ, ವೈಚಾರಿಕ ಪ್ರಜ್ಞೆಯಿಂದಾಗಿ ವಿಶಿಷ್ಟ ಸಾಧಕನಾಗಿ ಕಂಗೊಳಿಸುತ್ತಾರೆ. ಮಾನವ ಧರ್ಮವೇ ಶ್ರೇಷ್ಠವೆನ್ನುವ ಸಿದ್ಧರಾಮನ ಸು. ೧೯೬೨ ವಚನಗಳು 'ಕಪಿಲ ಸಿದ್ಧ ಮಲ್ಲಿಕಾರ್ಜುನ' ಎಂಬ ಅಂಕಿತದೊಡನೆ ಲಭ್ಯವಾಗಿದೆ.

ವೈಚಾರಿಕ ಚಿಂತನೆ, ಅತ್ಯಂತ ಮಾನವೀಯ ಕಳಕಳಿಯುಳ್ಳ ಸಿದ್ಧರಾಮ 'ಸಾಕಾರ ನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ಎನ್ನುವ ಸೂತ್ರವೇ ಆತನ ಬದುಕಿನ ಸಾರ. ಮತ್ತು ಅವನ ಪೂರ್ವಾತ್ತರ ಬದುಕಿನ ವ್ಯಾಖ್ಯಾನವೂ ಅದೇ ಆಗಿದೆ. ಸಿದ್ಧರಾಮನ ಜೀವಿಗಳ ಮೇಲಿನ ಕಾಳಜಿ, ಅನುಕಂಪೆ ಇವು ಈ ಭೂಮಿಯ ಮೇಲಿನ ಚೇತನಾ ಚೇತನಗಳನ್ನು ಅವರಿಸಿದೆ. ದಯಾಪರವಾದ ಜೀವನ ಪ್ರೀತಿಯ ಶ್ರೀಮಂತಿಕೆಯೇ ಅವನ ಕಾಯಕ ಸಿದ್ಧಾಂತ. ಸಾಕಾರ ನಿಷ್ಠೆಯಿಂದ ದೊರಕುವ ಆತ್ಮ ಕಲ್ಯಾಣವೂ, ಭೂತಾನುಕಂಪೆಯಿಂದ ದೊರೆಯುವ ಲೋಕ ಕಲ್ಯಾಣವೂ, ಇದರಿಂದ ದೊರಕುವ ಆನಂದ ಮಂಗಳಕರವು ಆತನ ಪರಬ್ರಹ್ಮ ಸ್ವರೂಪವೇ ಆಗಿದೆ. ಈ ಜಗದ ಜೀವಿಗಳಿಗೆ ಉಣಬಡಿಸುವ ಕಾಯಕ ನಿಜವಾದ ಜಂಗಮ ಶ್ರೇಷ್ಠತೆ. ಅದೇ ದೇವನನ್ನು ಕಾಣುವ ಪರಿಯೂ ಆಗಿದೆ ಎನ್ನುವ ಸಿದ್ಧರಾಮನ ಕರ್ಮಯೋಗವು ಎಲ್ಲಾ ಶರಣರಿಗಿಂತ ಭಿನ್ನವಾಗಿ ನಿಲ್ಲುವಂತದ್ದು. ಅದು ಜೀವ ದಯೆ, ಮಾನವ ಪ್ರೇಮವನ್ನು ಆಧರಿಸಿ ನಿಂತಿದೆ.

ತನ್ನ ಸುತ್ತಲ ಸಮಾಜದ ನೊಂದ ಜೀವಿಗಳಿಗೆ ಸಾಂತ್ವನ ನೀಡುವುದೇ ಇದರ ಮೂಲ ಉದ್ದೇಶ. ಅವನ ಸಾಮಾಜಿಕ ಕಾಯಕ ಕೆರೆ, ಕಟ್ಟೆ ಕಟ್ಟಿಸುವುದು, ಮದುವೆ, ಲತಾ ಮಂಟಪ, ಛತ್ರಗಳ ನಿರ್ಮಾಣ, ಜೀವ ಜಂತುಗಳಿಗೆ ನೀರು, ನೆರಳು. ಹಣ್ಣು, ಹಂಪಲುಗಳನ್ನು ಒದಗಿಸಲು ಗಿಡಮರಗಳನ್ನು ಬೆಳೆಸಿದನು. ಅನ್ನ ಸಂತರ್ಪಣೆ, ಜ್ಞಾನ ದಾಸೋಹ, ದೇವಾಲಯಗಳ ನಿರ್ಮಾಣ, ಸೊನ್ನಲಿಗೆಯಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಯೋಗ ಲಿಂಗ, ಪಂಚ ಮುಖಿಲಿಂಗ ಪ್ರತಿಷ್ಠಾಪನೆ ಮಾಡಿಸಿ ಅದಕ್ಕೆ ದೇವಸ್ಥಾನ ಕಟ್ಟಿಸಿ ಅಲ್ಲಿ ನಿರಂತರವಾಗಿ ಲಿಂಗಾಭಿಷೇಕ, ಪೂಜೆ, ನೈವೇದ್ಯ ಸಮರ್ಪಣೆ, ದಾನ ವಿತರಣೆ, ಉತ್ಸವ, ಹೋಮ.ಹವನ ಮುಂತಾದ ಕಾರ್ಯಗಳು ನಡೆಯುವಂತೆ ನೋಡಿಕೊಂಡನು. ಸಿದ್ಧರಾಮನ ಕಾಯಕ ನಿಷ್ಠೆಗೆ ಬೆರಗಾಗಿ ನಾಡಿನ ಬೇರೆ ಬೇರೆ ಭಾಗದ ಜನರು ಈ ದೇವಸ್ಥಾನಕ್ಕೆ ದಾನ ದತ್ತಿಗಳನ್ನು ಬಿಟ್ಟರು. ತ್ರಿವಿಧ ದಾಸೋಹಿಯಾಗಿದ್ದ ಸಿದ್ಧರಾಮ ಲೌಕಿಕದಿಂದ ದೂರವಾಗಿ ಬ್ರಹ್ಮಚಾರಿಯಾಗಿದ್ದರೂ ಜನಸಾಮಾನ್ಯರ ಸಾಮಾಜಿಕ ಬದುಕಿಗೆ ವಿವಾಹ ಸಂಸ್ಕಾರ ಅವಶ್ಯಕವೆಂದು ತಿಳಿದು ಆರ್ಥಿಕವಾಗಿ ದುರ್ಬಲರಾದವರಿಗಾಗಿ ಸಾಮೂಹಿಕ ವಿವಾಹವೆಂಬ ನೂತನ ವ್ಯವಸ್ಥೆಯನ್ನು ೧೨ನೇ ಶತಮಾನದಲ್ಲೇ ಪ್ರಾರಂಭ ಮಾಡಿದನು.

*** 'ಪ್ರಣವಂ' ಟೂಡಾ ಕಛೇರಿ ಹಿಂಭಾಗ, ಕುವೆಂಪು ನಗರ. ತುಮಕೂರು_ 572103**









ರೋಗ ರುಜಿನಗಳಿಗೆ ಔಷಧದ ವ್ಯವಸ್ಥೆಯ ನೆರವು, ಜನರಲ್ಲಿ ಬೇರುಬಿಟ್ಟಿದ್ದ ಮೌಢ್ಯ, ಅಂಧಶ್ರದ್ಧೆಗಳಿಗೆ ಪರಿಹಾರವನ್ನು ಸೂಚಿಸಲು ವೈಚಾರಿಕ ಚಿಂತನೆಯ ತಿಳುವಳಿಕೆಯನ್ನು ನೀಡಿದನು. 'ಭೂವಳದೊಳಗುಳ್ಳ ಸರ್ವ ಜೀವಾವಳಿಗಳ' ಕ್ಷೇಮ ಚಿಂತನೆಯ ಮಾಡುತ್ತಾ, ಸಕಲ ಜನ ಹಿತಕ್ಕಾಗಿ, ಲೋಕದ ಸಕಲ ಜೀವಿಗಳ ಅಂತರಂಗ ಬಹಿರಂಗ ಕ್ಷಮತೆಗಾಗಿ ಸಿದ್ಧರಾಮ ಕೈಗೊಂಡ ಕಾರ್ಯಗಳಿಂದಾಗಿ ಕುಗ್ರಾಮವೆನಿಸಿದ್ದ ಸೊನ್ನಲಿಗೆ ಆತನ ಕರ್ಮ ಕ್ಷೇತ್ರವಾಯಿತು. ಇಂದಿನ ಸೊಲ್ಲಾಪುರ ಸಹಜವಾಗಿಯೇ ಎರಡನೇ ಭೂ ಕೈಲಾಸವಾಗಿ ಪ್ರಸಿದ್ಧ ಯಾತ್ರಾ ಸ್ಥಳವಾಯಿತು.

ಸಿದ್ಧರಾಮನ ವಚನಗಳಲ್ಲಿ ಕಾಯಕ ನಿಷ್ಠೆ, ಸಮಾಜದ ಸುಧಾರಣೆಯ ಜೊತೆಗೆ ವೈಚಾರಿಕ ಚಿಂತನೆಯು ಜಾಗೃತವಾಗಿದ್ದು, ಆತನ ಬೌದ್ಧಿಕ ಸ್ವರೂಪ ಹಲವು ವಚನಗಳಲ್ಲಿ ಕ್ರಾಂತಿಕಾರಿಯಾಗಿ ವ್ಯಕ್ತವಾಗಿದೆ, ಹೊರಗಿನ ಡಂಭಾಚಾರದ ಪೂಜೆಗಿಂತ ಆತ್ಮ ನಿವೇದನೆಯ ಅಂತಃಕರಣ ಪೂರ್ವಕವಾದ ಸ್ಥಿತಿಯೇ ಪರಶಿವನ ಒಲುಮೆಗೆ ಕಾರಣವೆನ್ನುತ್ತಾರೆ.

**'ಕೆರೆಯ ನೀರು ಮರದ ಪುಷ್ಪವ ಧರಿಸಿದಡೇನು ಅಯ್ಯಾ**
**ಆಗುವುದೇ ಆಗುವುದೇ ಲಿಂಗಾರ್ಚನೆ?**
**ನೀರೆರೆಯಲಿಕ್ಕೇನು ಆತ ಬಿಸಿಲಿನಿಂದ ಬಳಲಿದ್ದನೆ?**
**ಪುಷ್ಪದಿಂದ ಧರಿಸಲಿಕ್ಕೆ ಆತನೇನು ವಿಟರಾಜನೆ?**
**ನಿನ್ನ ಮನವೆಂಬ ನೀರಿನಿಂದ, ಜ್ಞಾನವೆಂಬ ಪುಷ್ಪದಿಂದ**
**ಪೂಜಿಸಬಲ್ಲಡೆ ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.'**

ಸಿದ್ಧರಾಮ ಪರಮಾತ್ಮನ ಕಲ್ಪನಾ ಪೂಜೆಯನ್ನು ದಾರ್ಶನಿಕ ನೆಲೆಯಲ್ಲಿ ಈ ರೀತಿ ಸರ್ಮಥಿಸುತ್ತಾರೆ. ಬಾಹ್ಯ ಅಡಂಬರದ ಪೂಜೆಯಿಂದ ಯಾವುದೇ ಪ್ರಯೋಜನವು ಇಲ್ಲ. ಮಾನಸ ಪೂಜೆಯಿಂದ ಅಂತರಂಗಿಕವಾಗಿ ದೇವನನ್ನು ಕಾಣಬೇಕು. ಶಕ್ತಿ ವಿಶಿಷ್ಟನಾದ ಪರಮಾತ್ಮನು ಜಗದ್ವ್ಯಾಪಿಯಾಗಿದ್ದು ಎಲ್ಲಾ ಜೀವಿಗಳ ಹೃದಯಂಗಮ ದಲ್ಲೂ, ಅಣು,ಅಣು ರೇಣು ತೃಣ ಕಾಷ್ಟಗಳಲ್ಲಿ ಸನ್ನಿಹಿತನಾಗಿದ್ದಾನೆ ಎಂಬುದು ಅವನ ತಾತ್ವಿಕ ಪ್ರಜ್ಞೆ ಯಾಗಿದ್ದು, ಪರಶಿವನು ಶಿಲೆಯಲ್ಲಿ ಸುಪ್ತವಾಗಿದ್ದು, ಮಾನವ ಸ್ವರೂಪದಲ್ಲಿ ಪರಮಾತ್ಮನ ಅಭಿವ್ಯಕ್ತಿಯ ಪೂರ್ಣ ಸ್ವರೂಪವನ್ನು ಇಟ್ಟಿರುವುದರಿಂದಲೇ ಸರ್ವವ್ಯಾಪಿಯಾದ ಪರಮಾತ್ಮನು ಚೈತನ್ಯಶೀಲವಾದ ಸೃಷ್ಟಿಯ ಚರಾಚರ ಗಳಲ್ಲಿಯೂ ಕಾಣುತ್ತದೆ. ಗಿಡ ಮರಗಳಲ್ಲಿ, ಪಶು, ಪಕ್ಷಿಗಳಲ್ಲಿ, ಕಲ್ಲುಗಳಲ್ಲಿ ಕಾಣುತ್ತಾನೆ. ಸಕಲಜೀವಿಗಳಲ್ಲಿಯೂ ಪರಶಿವನೇ ಚರ್ಮಧರಿಸಿದಂತೆ ಕಾಣುತ್ತದೆ. ಅನಂತ ಕೋಟಿ ಕೋಟಿ ಜೀವಿಗಳ ಬಾಯಿಂದ ಅವನು ಭಕ್ಷಿಸುವುದು ಕಾಣುತ್ತದೆ. ಎಲ್ಲಾ ಜೀವಿಗಳ ಕಿವಿಯಿಂದ ಕೇಳುವ, ಕಣ್ಣುಗಳಿಂದ ನೋಡುವ, ಮೂಗಿನಿಂದ ಅಘ್ರಾಣಿಸುವ ಪರಶಿವನ ಈ ಜೀವಂತ ಕ್ರಿಯೆಯನ್ನು ಕಂಡು ಸಿದ್ಧರಾಮಣ್ಣನಿಗೆ ಈ ವಿಶ್ವಕ್ಕಿಂತ ಹೊರತಾಗಿ ದೇವನಿಲ್ಲ ಎಂಬ ಸ್ಪಷ್ಟ ಅರಿವು ವೇದ್ಯವಾಗುತ್ತದೆ.

ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಸಿದ್ಧರಾಮನ ಇಂತಹ ವೈಚಾರಿಕ ನಿಲುವು ಪ್ರಮುಖ ಪಾತ್ರವನ್ನು ವಹಿಸು ತ್ತದೆ. ಪುರೋಹಿತಶಾಹಿಗಳು ಸೃಷ್ಟಿಸಿದ ಪಾಪದ ಭೀತಿಯನ್ನು ತೊಲಗಿಸುವಲ್ಲಿ ವಿಚಾರಯುಕ್ತವಾದ ಸಿದ್ಧರಾಮನ ಆಲೋಚನೆಗಳು ಪ್ರಮುಖವಾದದ್ದು. ಸಿದ್ಧರಾಮ ವಿಚಾರ ವಾದಿಯಾಗಿ ತನ್ನ ಸ್ವತಂತ್ರವಾದ ಆಲೋಚನೆಗಳಿಂದ ಸ್ವರ್ಗ, ನರಕ, ದೇವರು, ಅದರ ಕಲ್ಪನೆ ಪೂಜಿಸುವ ರೀತಿ, ನೀತಿಗಳನ್ನು ಕಟುವಾಗಿ ಟೀಕಿಸುತ್ತಾ. ಜಾತಿರಹಿತ ಸಮಾಜದ ನಿರ್ಮಾಣ ಕ್ಕೆ ಶ್ರಮಿಸಿ ಸಮಾನತೆಯ ಮೌಲ್ಯವನ್ನು ಸಾರಿದರು. ಮಾನವೀಯ ಮೌಲ್ಯಗಳನ್ನು ಬಹುವಾಗಿ ಗೌರವಿಸಿದವರು. ದೈವದ ಹೆಸರಿನಲ್ಲಿ ವ್ಯರ್ಥವಾಗಿ ಪ್ರಯತ್ನಪಡುವ ಅನಾಚಾರಿಗಳನ್ನು ತೀಕ್ಷಣವಾಗಿ ವ್ಯಂಗ್ಯ ಮಾಡುವ ಸಿದ್ಧರಾಮ

**'ಒಬ್ಬರ ಮನವ ನೋಯಿಸಿ**
**ಒಬ್ಬರ ಮನವ ಘಾತವ ಮಾಡಿ**
**ಗಂಗೆಯ ಮುಳುಗಿದೊಡೇನಾಗುವುದಯ್ಯಾ?**
**ಚಂದ್ರನು ಗಂಗೆಯ ತಡಿಯಲ್ಲಿದಡೇನು ?**
**ಕಲಂಕ ಬಿಡದಾಯಿತ್ತಯ್ಯ'**

ಮಾನವ ಮಾನವನಾಗಿ ಬದುಕುವುದನ್ನು ಕಲಿಯಬೇಕು. ಪ್ರೀತಿ, ಕರುಣೆ ಅಂತಃಕರಣ ಪೂರ್ವಕ ವಾದ ನಡೆ ನುಡಿಯಿಂದ ಮಾತ್ರ ದೈವದ ಸಾಕಾರ ವಾಗುತ್ತದೆ. ಬಾಹ್ಯವಾದ ಪೂಜಾಡಂಬರದಿಂದ ದೈವವನ್ನು ಕಾಣುವುದಕ್ಕೆ ಸಾಧ್ಯವಾಗುವುದಿಲ್ಲ.

**'ಪತ್ರೆಯ ನೇಮದವರು ಒಂದು ಕೋಟಿ**
**ಲಿಂಗಾರ್ಚನೆಯ ನೇಮದವರು ಒಂದು ಕೋಟಿ**
**ಜಂಗಮ ತೃಪ್ತಿಯವರು ಒಂದು ಕೋಟಿ**
**ತನ್ನ ತಾ ತಿಳಿಯುವ ನೇಮದವರು ಒಬ್ಬರು ಇಲ್ಲವಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜನಾ.'**

ಜನರು ಯಾವುದೋ ಸಮೂಹ ಸನ್ನಿಯಲ್ಲಿ ಮುಳುಗಿ ತೇಲುತ್ತಿದ್ದಾರೆ. ಮರುಳಿನ ಮಾಯೆಗೆ ಸಿಲುಕಿ ದೈವವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲಾಗದೆ, ತನ್ನನ್ನು ತಾನು ಕಂಡುಕೊಳ್ಳಲಾಗದೆ ಲಯವಾಗಿ ಹೋಗುತ್ತಿದ್ದಾರೆ. ಎನ್ನುವ ಸಿದ್ಧರಾಮನ ವೈಚಾರಿಕ ಚಿಂತನೆಗಳು, ಆದರ್ಶಗಳು ನಮ್ಮನ್ನು ನಾವು ಕಂಡುಕೊಳ್ಳುವಂತೆ ಮಾಡುತ್ತದೆ.

'ಕೈಲಾಸ ಕೈಲಾಸವೆಂದು ಬಡಿದಾಡುವ
ಅಣ್ಣಗಳಿರಾ ಕೇಳಿರಯ್ಯಾ
ಕೈಲಾಸವೆಂಬುದೊಂದು ಭೂಮಿಯೊಳಗಿನ ಹಾಳು ಬೆಟ್ಟ
ಅದರಲ್ಲಿರುವ ಮುನಿಗಳೆಲ್ಲಾ ಜೀವಗಳ್ಳರು
ಅಲ್ಲಿರ್ಧ ಚಂದ್ರಶೇಖರನು ಬಹು ಎಡ್ಡ
ಎದರಾಡಂಬರವೇಕಯ್ಯಾ? ಎಮ್ಮ ಪುರಾತನರಿಗೆ
ಸದಾಚಾರದಿಂದ ವರ್ತಿಸಿ
ಲಿಂಗಾಂಗ ಸಾಮರಸ್ಯವ ತಿಳಿದು
ನಿಮ್ಮ ಪಾದ ಪದ್ಮಗೊಳು ಬಯಲಾದ ಪದವೆ
ಕೈಲಾಸವಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.'

ಇಲ್ಲಿ ಸಿದ್ಧರಾಮನ ನೇರ, ದಿಟ್ಟ, ವಾಸ್ತವ ಚಿಂತನೆಯು ಕಂಡು ಬರುತ್ತದೆ. ಇಹದ ಬದುಕನ್ನು ಬಿಟ್ಟು ಪರವನ್ನು ಕಲ್ಪಿತ ಅಸತ್ಯದಲ್ಲಿ ನಂಬಿಕೆ ಇಡುವ ಜನರಿಗೆ, ಸದಾಚಾರ ಲಿಂಗಾಂಗ ಸಾಮರಸ್ಯದ ಬಗ್ಗೆ ತಿಳಿ ಹೇಳುವ ಆತ ಐಕ್ಯ ಸ್ಥಲದಲ್ಲಿ ಆತ್ಮ ಬಯಲಾಗುವ ಸಂತಸವೇ ಕೈಲಾಸವೆಂಬ ಸತ್ಯವನ್ನು ತಿಳಿದುಕೊಳ್ಳಬೇಕು ಎನ್ನುವ ಸಿದ್ಧರಾಮನ ಬಹಳಷ್ಟು ವಚನಗಳಲ್ಲಿ ಇಂತಹ ಜಾಗೃತ ಪ್ರಜ್ಞೆಯ ವೈಚಾರಿಕ ಚಿಂತನೆಗಳು ವ್ಯಕ್ತವಾಗಿದೆ.ಅವನೊಬ್ಬ ಅಪ್ಪಟ ವಿಮರ್ಶಕ, ವಿಚಾರಶೀಲ, ದೈವತ್ವದಲ್ಲಿ ಮಾನವೀಯ ಪ್ರೀತಿಯನ್ನು ಕಂಡವನು.

ಹೀಗೆ ಕವಿಯಾಗಿಯೂ ಶ್ರೇಷ್ಠ ವಚನಕಾರನಾಗಿದ್ದಾರೆ. ಸ್ವಚ್ಛ ಮನಸ್ಸಿನ ಜ್ಞಾನದಿಂದಲೇ ಮುಕ್ತಿ. ಜ್ಞಾನಿಗೆ ಭಕ್ತಿಯ ಜೊತೆಗೆ ಕರ್ಮದ ಅವಶ್ಯಕತೆಯೂ ಇದೆ ಇಲ್ಲ ಎನ್ನುವ ಸಿದ್ಧರಾಮ, ಚಿತ್ತ ಶುದ್ಧಿಗೆ ಕರ್ಮವೂ ಅವಶ್ಯವೆನ್ನುತ್ತಾರೆ. ಶಿವಯೋಗಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದರೂ ಅದಕ್ಕಿಂತಲೂ ಹೆಚ್ಚಿನ ಪ್ರಾಮುಖ್ಯತೆಯನ್ನು ಕರ್ಮಯೋಗಕ್ಕೆ ಕೊಟ್ಟಿದ್ದು ಅದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ.

'ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೋ?
ಕರ್ಮ ಯೋಗವ ಮಾಡದೆ ನಿರ್ಮಲ ಸುಚಿತ್ತವನ್ನರಿವ ಪರಿ
ಇನ್ನೆಂತೋ?
ಬೇಯದ ಅಶನವನುಂಬ ಠಾವಾವುದು ಹೇಳಾ ಕಪಿಲಸಿದ್ಧ
ಮಲ್ಲಿಕಾರ್ಜುನಾ'.
'ನಿರ್ಮಲ ಕರ್ಮವದು ಸದ್ಗತಿಗೆ ಸಾಧನ ನೋಡಾ
ನಿರ್ಮಲ ಕರ್ಮವದು ಜ್ಞಾನಕ್ಕೆ ವರ್ದನ ನೋಡಾ
ನಿರ್ಮಲ ಕರ್ಮವದು ಕಪಿಲಸಿದ್ಧ ಮಲ್ಲಿಕಾರ್ಜುನನ
ಕೂಡುವ ಕೊಟ ನೋಡಾ'.

ಕಾಯಕ ಮಾಡುವುದು ಚಿತ್ತ ಶುದ್ದಿಗೆ ಪ್ರೇರಕ. ಕರ್ಮವನ್ನು ಯೋಗ ಧರ್ಮಕ್ಕೆ ಎತ್ತರಿಸಿದ ಸಿದ್ಧರಾಮನಿಗೆ ಕರ್ಮವು ಕೇವಲ ಹೊಟ್ಟೆ ಹೊರೆಯಲು ದೈಹಿಕ ಶ್ರಮ ಮಾಡಲು ಮಾತ್ರ ಕಾರಣವಲ್ಲ. ಅದು ಪರಮಾತ್ಮನಲ್ಲಿ ಲೀನವಾಗಲು ಸಾಧನ ಕೂಡ ಎನ್ನುವ ಸಿದ್ಧರಾಮ ನುಡಿಯಂತೆ ನಡೆಯಲ್ಲಿ ಅನುಷ್ಠಾನ ಮಾಡಿ, ಸಕಲ ಜೀವಾವಳಿಗಳ ಹಿತಕ್ಕಾಗಿ ತನ್ನ ಜೀವನವನ್ನು ಮೀಸಲಿಟ್ಟ ಯೋಗಿಗಳ ಯೋಗಿ. ಪರೋಪಕಾರಿ ಯೋಗಿ ಶ್ರೇಷ್ಠರಾಗಿದ್ದಾರೆ.

ಕಾಯಕದ ಕರ್ಮ ಸಿದ್ಧಾಂತಕ್ಕೂ, ಆಧ್ಯಾತ್ಮ ಸಿದ್ಧಿಯ ಅವಕಾಶವನ್ನು ಕೊಟ್ಟು ಭಕ್ತಿ ಜ್ಞಾನ ವೈರಾಗ್ಯ ಕ್ರಿಯೆ ಇವೆಲ್ಲವುಗಳ ಸಮನ್ವಯತೆಯನ್ನು ಕಾಯ್ದು ಕೊಂಡವನು ಸಿದ್ಧರಾಮ. 'ಸಾಕಾರ ನಿಷ್ಠೆ ಭೂತಗಳನುಕಂಪೆ' ಎಂಬ ಜೀವನ ಸೂತ್ರ ಮಾನವ ಪರವಾದ ಮೌಲ್ಯವಾಗಿ ಎಲ್ಲರಿಗೂ ಆದರ್ಶ ಪ್ರಾಯವಾದರು. ಸಿದ್ಧರಾಮ ಕಾಯಕ ಯೋಗಿ, ಶಿವಯೋಗಿ ಎಂದೆಲ್ಲಾ ಕರೆಸಿಕೊಂಡು ಮಹಾನ್ ಮಾನವೀಯ ಅನುಕಂಪೆಯಿಂದ ಯಾರನ್ನು ನೋಯಿಸಲಾಗದ ಲೋಕ ಕಾರುಣ್ಯವೇ ಇವನ ಸಾಧನೆಯ ತಳಪಾಯ. ಸಕಲ ಜೀವ ದಯಾಪರತೆ, ನಿರ್ಲಿಪ್ತ ಕರ್ಮ ಮಾರ್ಗ, ಪೂರ್ಣ ವೈಚಾರಿಕ ಅಂತರಿಕ ವಿಕಾಸ ಇವು ಎಲ್ಲಾ ಕಾಲಕ್ಕೂ ಶಾಶ್ವತ ಮೌಲ್ಯಗಳು.

ಸಿದ್ಧರಾಮನ ಸಾಮಾಜಿಕ ಕಾಳಜಿಯುಳ್ಳ ಕರ್ಮ ಯೋಗ, ಕಾಯಕ ನಿಷ್ಠೆ, ಆಧುನಿಕ ಯುಗದಲ್ಲಿ ಹೆಚ್ಚು ಪ್ರಸ್ತುತ. ತನ್ನ ಸಮಾಜದ ಅಭಿವೃದ್ಧಿಗೆ ದೀಕ್ಷಾಬದ್ಧನಾಗಿ ಶ್ರಮಿಸುವಂತಹ ನಾಯಕತ್ವದ ಗುಣವುಳ್ಳ, ದಯಾಪರವಾದ ಸಿದ್ಧರಾಮನಂತಹವರು ಇಂದು ಬೇಕಾಗಿದ್ದಾರೆ. ನಮ್ಮ ನಡುವಿನ ಸಾಮಾಜಿಕ ದಯಾಪರವಾದ ಮೌಲ್ಯಗಳು ಕುಸಿಯುತ್ತಿರುವ ಇಂತಹ ಹೊತ್ತಿನಲ್ಲಿ, ಸಿದ್ಧರಾಮನ ಜೀವನ ಸಿದ್ಧಾಂತಗಳು ಆದರ್ಶಪ್ರಾಯವಾದದ್ದು. ಸಿದ್ಧರಾಮ ಅಲ್ಲಮಪ್ರಭುಗಳನ್ನು ಬೇಟಿಯಾಗುವವರೆಗೂ ಈ ಜಗತ್ತಿನ ಉದ್ಧಾರಕ್ಕಾಗಿ ನಂತರದಲ್ಲೂ ಸೊನ್ನಲಿಗೆಯನ್ನು ಅಭಿನವ ಕೈಲಾಸವನ್ನಾಗಿ ಪರಿವರ್ತನೆ ಮಾಡಿದ ಜೀವ ಯೋಗಿ. ಡಿ. ಎಲ್. ನರಸಿಂಹಾಚಾರ್ಯರು 'ಸಿದ್ಧರಾಮನಂತಹ ನಿಷ್ಕಾಮ ಕರ್ಮಿಗಳೂ, ಸೇವಾಧುರಂಧರರೂ ಹೆಚ್ಚಿದಷ್ಟು ನಮಗೆ ಈಗ ಒಳ್ಳೆಯದು. ಹೀನ ಸ್ಥಿತಿಗೆ ಇಳಿದಿರುವ ನಮ್ಮ ಹಳ್ಳಿಗಳು ಪುನರುಜ್ಜೀವನವಾಗಬೇಕು. ಜನ ವಿದ್ಯಾವಂತರಾಗಿ ಪ್ರಜಾರಾಜ್ಯದ ಸ್ವರೂಪವನ್ನು ತಿಳಿಯಬೇಕು. ಸಿದ್ಧರಾಮನಂತೆ ಎಲ್ಲರೂ ಅಭಿರಾಮರಾಗಲು ಪ್ರಯತ್ನ ಪಡಿರಿ; ಸೇವೆಯಲ್ಲಿ ಅನುರಕ್ತರಾಗಿ, ನೀವೂ ಬದುಕಿ ಜನರನ್ನು ಬದುಕುವಂತೆ ಮಾಡಿ ಇದೇ ಶ್ರೀ ಗುರು ಸಿದ್ಧರಾಮರ ಸಂದೇಶ' ಎಂಬ ಮಾತುಗಳನ್ನು ನಾವೆಲ್ಲಾ ಮನಗಾಣಬೇಕು. ಸಿದ್ಧರಾಮರ ಸೇವಾ ಮನೋಭಾವವನ್ನು, ತತ್ತ್ವಗಳನ್ನು ಅಳವಡಿಸಿ ಕೊಂಡಾಗ ನಮ್ಮೆಲ್ಲರ ಬದುಕು ಸಾರ್ಥಕವಾಗುತ್ತದೆ.



ಅಭಿನಂದನೆ

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹಿರಿಯ ಸಾಹಿತಿ ಪ್ರೊ. ಮಲೆಯೂರು ಗುರುಸ್ವಾಮಿಯವರು

ಕಳೆದ ೨೫ ವರ್ಷಗಳಿಂದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ದಾಖಲೆ ನಿರ್ಮಿಸಿದ, ಶರಣ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳನ್ನು ಗ್ರಾಮ ಮಟ್ಟದಿಂದ ಅಖಿಲ ಭಾರತ ಮಟ್ಟದವರೆಗೂ ವ್ಯಾಪಿಸುವಂತೆ ಮಾಡಿದ, ಹಿರಿಯ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪನವರು ವೃದ್ಧಾಪ್ಯದಿಂದಾಗಿ ಸ್ವಯಂ ನಿವೃತ್ತಿ ಬಯಸಿದ್ದರಿಂದ ಅವರ ಸ್ಥಾನಕ್ಕೆ ಹಿರಿಯ ವಿದ್ವಾಂಸರಾದ ಪ್ರೊ ಮಲೆಯೂರು ಗುರುಸ್ವಾಮಿ ಅವರನ್ನು ಪರಿಷತ್ತಿನ ಗೌರವಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಹಾಗೂ ಪೂಜ್ಯ ಡಾ. ಶ್ರೀ ಶ್ರೀ ತೋಂಟದ ಸಿದ್ಧರಾಮ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದ ಕಾರ್ಯ ಸಮಿತಿ ಅನುಮೋದನೆಯಂತೆ ಸರ್ವಾನುಮತದಿಂದ ಆಯ್ಕೆ ಮಾಡಿದಕ್ಕೆ ಪ್ರೊ. ಮಲೆಯೂರು ಗುರುಸ್ವಾಮಿ ಅವರಿಗೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಹಾಗೂ ಶುಭಾಶಯಗಳನ್ನು ಕೋರುತ್ತದೆ.

ಅಕ್ಟೋಬರ್ ೧, ೧೯೪೭ ರಲ್ಲಿ ಚಾಮರಾಜನಗರ ತಾಲ್ಲೂಕು ಮಲೆಯೂರಿನಲ್ಲಿ ಶರಣ ದಂಪತಿಗಳಾದ ಶಿವಣ್ಣ ಮತ್ತು ಮಲ್ಲಮ್ಮ ಅವರ ಸುಪುತ್ರರಾಗಿ ಜನಿಸಿದ ಗುರುಸ್ವಾಮಿಯವರು ಜೆ.ಎಸ್.ಎಸ್. ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಮೂವತ್ತೂರು ವರ್ಷಗಳ ಸುದೀರ್ಘ ಕಾಲ ಸೇವೆ ಸಲ್ಲಿಸಿ ನಿವೃತ್ತರಾದರು.

ಸಾಹಿತ್ಯ ಕ್ಷೇತ್ರ : ಮಲೆ ಮಹದೇಶ್ವರರನ್ನು ಕುರಿತು ಚಾರಿತ್ರಿಕ ಕಾದಂಬರಿ ಮಹಾಯಾತ್ರಿಕ, ಅಪ್ರತಿಮವೀರ, ಕಪಿಲೆ ಹರಿವಳು ಕಡಲಿಗೆ, ಬಂಗಾರದೊಡ್ಡಿ, ಮಾತಿನೊಳಗಣ ಮೌನ, ಮಾತೆಂಬುದು ಜ್ಯೋತಿರ್ಲಿಂಗ, ಶ್ರೀ ಕಾರ್ಯಸ್ವಾಮಿ ಮಠ, ಪ್ರಭುಲಿಂಗ ಲೀಲೆ, ಬಸವಣ್ಣ ಮೊದಲಾದ ಸೃಜನಶೀಲ ಕೃತಿಗಳನ್ನು, ಮೂಡಲ ಸೀಮೆಯ ಕಥೆಗಳು, ಕಾಡಂಚಿನ ಕೋಗಿಲೆಗಳ ಕಲರವ, ಜಂಗಮ, ಹೆಚ್ಚಿಗೆ, ರಾಜಪಥ, ಸೇವಾಸಿರಿ, ಸುತ್ತೂರು ಶ್ರೀಮಠದ ಗುರುಪರಂಪರೆ ಮೊದಲಾದ ಸಂಪಾದಿತ ಕೃತಿಗಳನ್ನು, ಚಿಕ್ಕದಣ್ಣಾಯಕ, ಚನ್ನಬಸವಣ್ಣ ಜಾನಪದ ಕೃತಿಯನ್ನು ಹೊರತಂದಿದ್ದಾರೆ. 'ಪ್ರಸಾದ' ದ್ವೈಮಾಸಿಕ ಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿರುವ ಪ್ರೊ. ಮಲೆಯೂರು ಗುರುಸ್ವಾಮೀಯವರು ಒಂಬತ್ತು ವರ್ಷಗಳ ಕಾಲ ಚಾಮರಾಜನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಮೈಸೂರು ವಿಶ್ವವಿದ್ಯಾಲಯದ ಬಸವಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿ, ಗ್ರಾಮ ಚರಿತ್ರೆ ಕೋಶದ ಚಾಮರಾಜನಗರ ಜಿಲ್ಲೆ ಸಂಪಾದಕರಾಗಿ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದಾರೆ.

ಪ್ರಶಸ್ತಿಗಳು : ಪ್ರೊ. ಮಲೆಯೂರು ಗುರುಸ್ವಾಮಿಯವರು ಸಾಹಿತ್ಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಮಹಾಕವಿ ಷಡಕ್ಷರ ದೇವ ಸ್ಮಾರಕ ಪ್ರಶಸ್ತಿ, ಚಾಮರಾಜನಗರ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ರೋಟರಿ (ಪೂರ್ವ) ರಾಜ್ಯೋತ್ಸವ ಪ್ರಶಸ್ತಿ, ಮೈಸೂರು, ಕನ್ನಡ ಸಾಹಿತ್ಯ ಪರಿಷತ್ ಶತಮಾನೋತ್ಸವ ಪ್ರಶಸ್ತಿ, ಸಪ್ನ ಬುಕ್ ಹೌಸ್ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ರಾಜ್ಯ ದಕ್ಷಿಣ ವಲಯ ರಸ್ತೆ ಸಾರಿಗೆ ಸಂಸ್ಥೆಯ ಸಾಹಿತ್ಯ ಸಿರಿ ಪ್ರಶಸ್ತಿ, 'ಮಹಾಮನೆ' ಅಭಿನಂದನಾ ಗ್ರಂಥ ಗೌರವ ಸೇರಿದಂತೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಪ್ರೊ. ಮಲೆಯೂರು ಗುರುಸ್ವಾಮಿಯವರು ತಮ್ಮ ಸೇವಾವಧಿಯಲ್ಲಿ ಪರಿಷತ್ತಿನ ಚಟುವಟಿಕೆಗಳು ಮತ್ತಷ್ಟು ಹೆಚ್ಚುವಂತೆ ಮಾಡುವಲ್ಲಿ, ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು, ಅನುಷ್ಠಾನಗೊಳಿಸಲಿ ಎಂದು ಸಿದ್ಧಗಂಗಾ ಶುಭಕೋರುತ್ತದೆ.

# ಚಿಲುಮೆ ಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು ಲಿಂಗೈಕ್ಯ



ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು, ಸೋಲೂರು ಚಿಲುಮೆ ಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು ಡಿಸೆಂಬರ್ ೨೦ ರಂದು ಲಿಂಗೈಕ್ಯರಾದರು. ಅವರಿಗೆ ೭ ವರ್ಷವಾಗಿತ್ತು.

ಪೂರ್ವಾಶ್ರಮದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ವಡಗೆರೆಯ ಶರಣ ದಂಪತಿಗಳಾದ ಪುಟ್ಟಶಾಮಯ್ಯ ಮತ್ತು ಸಿದ್ಧಲಿಂಗಮ್ಮ ಅವರ ಸುಪುತ್ರರಾದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು ೧೯೮೨ ರಲ್ಲಿ ಶ್ರೀ ಚಿಲುಮೆ ಮಠದ ಸಂನ್ಯಾಸ ದೀಕ್ಷೆಯನ್ನು ಪಡೆದರು. ಆಧ್ಯಾತ್ಮಿಕ ಚಿಂತಕರಾಗಿದ್ದ ಶ್ರೀಗಳು ಮಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸಲು ಶ್ರಮಿಸಿದ್ದರು. ಆಧ್ಯಾತ್ಮಿಕ ಕೃಷಿಯ ಜೊತೆಗೆ ಮಠಕ್ಕೆ ಸೇರಿದ ಭೂಮಿಯಲ್ಲಿ ಕೃಷಿ ಕಾಯಕವನ್ನು ಮಾಡುತ್ತಿದ್ದರು.

ಪೂಜ್ಯರು ಲಿಂಗೈಕ್ಯರಾದ ಸುದ್ದಿಯನ್ನು ಕೇಳಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಸಂತಾಪ ಸಂದೇಶದಲ್ಲಿ "ಚಿಲುಮೆ ಮಠದಲ್ಲಿ ನಿಜವಾದ ಜೀವ ಬತ್ತಿಹೋಗಿದೆ, ಮಠದ ಜ್ಯೋತಿ ಆರಿಹೋಗಿದೆ. ಭಕ್ತರು ಯಾರೂ ಧೃತಿಗೆಡದೆ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗಬೇಕು" ಎಂದು ತಿಳಿಸಿದ್ದಾರೆ.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಚಿಲುಮೆ ಮಠದಲ್ಲಿ ಸಮಾಧಿಕ್ರಿಯೆ ನಡೆಸಲಾಯಿತು. ಈ ಸಂದರ್ಭದಲ್ಲಿ ಗದ್ದುಗೆ ಮಠದ ಪೂಜ್ಯ ಶ್ರೀ ಶ್ರೀ ಮಹಾಂತ ಸ್ವಾಮೀಜಿ, ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮೀಜಿ, ಶ್ರೀ ಹೊನ್ನಮ್ಮಗವಿ ಮಠದ ಪೂಜ್ಯ ಶ್ರೀ ಶ್ರೀ ರುದ್ರಮುನಿ ಶಿವಾಚಾರ್ಯ ಸ್ವಾಮಿಗಳು, ಚಿಕ್ಕಮಸ್ಕಲ್ ಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮೀಜಿ, ಬಸವಣ್ಣದೇವರ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಗುರುವಣ್ಣದೇವರ ಮಠದ ಪೂಜ್ಯ ಶ್ರೀ ಶ್ರೀ ನಂಜುಂಡ ಸ್ವಾಮಿಗಳು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ವೀರಶೈವ ಮುಖಂಡರಾದ ಶ್ರೀ ಶಿವರುದ್ರಯ್ಯ, ಕೆ.ಆರ್.ಐ.ಡಿ.ಎಲ್. ಅಧ್ಯಕ್ಷ ಶ್ರೀ ಎಂ. ರುದ್ರೇಶ್ ಹಾಗೂ ಅಪಾರ ಸಂಖ್ಯೆಯ ಮಠದ ಭಕ್ತರು ಭಾಗವಹಿಸಿದ್ದರು.

ಪೂಜ್ಯ ದಿವ್ಯಾತ್ಮಕ್ಕೆ ಬಸವಾದಿ ಶರಣರು ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಭಕ್ತಿಪೂರ್ವಕ ಶ್ರದ್ಧೆಯನ್ನು ಅರ್ಪಿಸುತ್ತದೆ.

**ಪುಣ್ಯಸ್ಮರಣೆ :** ಡಿಸೆಂಬರ್ ೨೦ ರಂದು ಲಿಂಗೈಕ್ಯ ಪೂಜ್ಯ ಶ್ರೀ ಶ್ರೀ ಬಸವಲಿಂಗ ಮಹಾಸ್ವಾಮಿಗಳವರ ಪುಣ್ಯಾರಾಧನಾ ಕಾರ್ಯಕ್ರಮದ ಅಂಗವಾಗಿ ಸ್ಮರಣೋತ್ಸವ ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭವನ್ನು ಕನಕಪುರ ಶ್ರೀ ದೇಗುಲಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಶ್ರೀ ಗದ್ದಿಗೆಮಠದ ಪರಮಪೂಜ್ಯ ಶ್ರೀ ಶ್ರೀ ಮಹಂತ ಸ್ವಾಮಿಗಳವರು ವಹಿಸಿದ್ದರು. ಶ್ರೀ ಕಂಚುಗಲ್ ಬಂಡೇಮಠದ ಪರಮಪೂಜ್ಯ ಚರಮೂರ್ತಿ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ನುಡಿನಮನವನ್ನು ಶ್ರೀ ಹೊನ್ನಮ್ಮಗವಿ ಮಠದ ಷ.ಬ್ರ. ಶ್ರೀ ಶ್ರೀ ರುದ್ರಮುನಿ ಶಿವಾಚಾರ್ಯ ಸ್ವಾಮಿಗಳು, ಶ್ರೀ ಬೆಟ್ಟಹಳ್ಳಿ ಮಠದ ಷ.ಬ್ರ. ಶ್ರೀ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಸಲ್ಲಿಸಿದರು. ಹಿರಿಯ ವಿದ್ವಾಂಸರಾದ ಶ್ರೀ ಕೋ.ರಂ. ಬಸವರಾಜು ಅವರು ಉಪನ್ಯಾಸ ನೀಡಿದರು.

ಸಮಾರಂಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಗಣ್ಯರು, ಅಭಿಮಾನಿಗಳು, ಭಕ್ತರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಶಿವಪೂಜೆಯನ್ನು ಏರ್ಪಡಿಸಲಾಗಿತ್ತು.



## ಆರೋಗ್ಯ

# ಡಯಾಬಿಟೀಸ್ ಬಗ್ಗೆ ಎಚ್ಚರವಿರಲಿ

– ಡಾ. ಎಂ.ಎಸ್. ರಾಜಣ್ಣ *

ಡಯಾಬಿಟೀಸ್ ಎಂದರೆ ರಕ್ತದಲ್ಲಿ ಹೆಚ್ಚು ಪ್ರಮಾನದ ಸಕ್ಕರೆ ಅಂಶ ಇರುವ ಪರಿಸ್ಥಿತಿ ಎಂದು ತಿಳಿಯಬಹುದು. ಎಲ್ಲ ಅಂಗಾಂಗಗಳ ಕಾರ್ಯ ಚುಟವಟಿಕೆಗೆ ಸಕ್ಕರೆ ಅಂಶ ಬೇಕಾಗುತ್ತದೆ. ಆದರೆ ಸಕ್ಕರೆ ಅಂಶ ರಕ್ತದಲ್ಲಿ ಹೆಚ್ಚಾಗಿದ್ದರೆ ಅದರಿಂದ ಅನೇಕ ತೊಂದರೆಗಳು ಉಂಟಾಗುತ್ತದೆ.

ರಕ್ತದಲ್ಲಿ ಸಕ್ಕರೆ ಅಂಶ ಜೀವ ಕಣಗಳಲ್ಲಿ ಸರಿಯಾಗಿ ಉಪಯೋಗಿಸಲ್ಪಡಬೇಕಾದರೆ ಮೇದೋಜೀರಕಾಂಗ (ಪ್ಯಾನ್‌ಕ್ರಿಯಾಸ್) ತಯಾರಿಸುವ ಇನ್ಸುಲಿನ್ ಎಂಬ ಹಾರ್ಮೋನ್ ಅಗತ್ಯ. ಇನ್ಸುಲಿನ ಹಾರ್ಮೋನ್ ತಯಾರಿಕೆ ಇಲ್ಲದಿದ್ದರೆ, ತಯಾರಿಕೆ ಕಡಿಮೆ ಇದ್ದರೆ ಅಥವಾ ಲೋಪದಿಂದ ಕೂಡಿದ್ದರೆ ರಕ್ತದಲ್ಲಿರುವ ಸಕ್ಕರೆ ಅಂಶ ಸರಿಯಾಗಿ ಜೀವ ಕಣಗಳಲ್ಲಿ ಉಪಯೋಗವಾಗದೆ ರಕ್ತದಲ್ಲಿ ಸಕ್ಕರೆ ಅಂಶ ಹೆಚ್ಚಾಗಿ ಉಳಿಯುತ್ತದೆ.

ದಯಾಬಿಟೀಸ್ ತೊಂದರೆ ಕೇವಲ ಶ್ರೀಮಂತರಿಗೆ ಮೀಸಲಾಗಿಲ್ಲ. ಜೀವನ ರೀತಿಯಲ್ಲಿ ಬದಲಾವಣೆ, ನಗರಿಕರಣ, ಆಲಸ್ಯ ಜೀವನ, ಇದರಿಂದಾಗಿ ಹೆಚ್ಚು ಹೆಚ್ಚು ಡಯಾಬಿಟೀಸ್ ರೋಗಿಗಳು ಕಂಡು ಬರುತ್ತಿದ್ದಾರೆ. ಅಂಕಿ ಅಂಶಗಳ ಪ್ರಕಾರ ಈ ಶತಮಾನದ ಅಂತ್ಯದ ವೇಳೆಗೆ ನಮ್ಮ ದೇಶದಲ್ಲಿ ಸುಮಾರು ೪೦ ದಶಲಕ್ಷ ದಯಾಬಿಟೀಸ್ ರೋಗಿಗಳು ಇದ್ದು ಶೇಕಡ ೧೦ ರಷ್ಟು ಪಟ್ಟಣ ಪ್ರದೇಶದಲ್ಲಿಯೂ ಹಾಗೂ ಶೇಕಡ ೨-೫ ರಷ್ಟು ಹಳ್ಳಿಗಳಲ್ಲಿಯೂ ಈ ರೋಗಿಗಳು ಕಂಡುಬರುತ್ತಾರೆ.

**ಡಯಾಬಿಟೀಸ್ ರೋಗಿಗಳಲ್ಲಿ ಕಂಡುಬರುವ ತೊಂದರೆಗಳು**

ಮೂತ್ರದಲ್ಲಿ ಸಕ್ಕರೆ ಅಂಶ ಆರೋಗ್ಯವಂತರ ದೇಹದಲ್ಲಿ ಇರುವುದಿಲ್ಲ. ಡಯಾಬಿಟೀಸ್ ರೋಗಿಗಳ ರಕ್ತದಲ್ಲಿ ಸಕ್ಕರೆ ಅಂಶ ಹೆಚ್ಚಾದಾಗ ಮೂತ್ರದಲ್ಲಿ ವಿಸರ್ಜನೆಯಾಗುವ ಸಕ್ಕರೆ ತನ್ನೊಂದಿಗೆ ನೀರನ್ನು ಹೆಚ್ಚು ಹೊರ ಹಾಕುತ್ತದೆ. ಆದ್ದರಿಂದ ರೋಗಿಗಳು ಹೆಚ್ಚು ಸಲ ಮೂತ್ರವಿಸರ್ಜನೆ ಮಾಡುತ್ತಾರೆ. ಹೆಚ್ಚು ನೀರು ವಿಸರ್ಜನೆಯಾಗುವುದರಿಂದ ಹೆಚ್ಚು ಬಾಯಾರಿಕೆಯಾಗುತ್ತದೆ. ಜೀವ ಕಣಗಳಿಗೆ ಸಕ್ಕರೆ ಅಂಶ ದೊರೆಯದೆ (ರಕ್ತದಲ್ಲಿ ಸಕ್ಕರೆ ಅಂಶ ಹೆಚ್ಚಿದ್ದರೂ ಸಹ) ಜೀವಕಣಗಳು ಸಕ್ಕರೆಗಾಗಿ ಹಾಹಾಕಾರ ಮಾಡುತ್ತದೆ. ಅಂದರೆ ಹಸಿವು ಹೆಚ್ಚಾಗುತ್ತದೆ. ಜೀವಕಣಗಳಿಗೆ ಸಕ್ಕರೆ ಸರಿಯಾಗಿ ದೊರೆಯದೆ ಪ್ರೋಟೀನ್ ಹಾಗೂ ಕೊಬ್ಬಿನ ಅಂಶವನ್ನು ಉಪಯೋಗಿಸಿಕೊಳ್ಳುವುದರಿಂದ ರೋಗಿಗಳು ಕೃಶವಾಗುತ್ತಾರೆ. ಸುಸ್ತು, ಸಂಕಟ, ಇತ್ಯಾದಿ ತೊಂದರೆಗಳನ್ನು ವ್ಯಕ್ತಪಡಿಸುತ್ತಾರೆ. ಜತೆಗೆ ರೋಗ ನಿರೋಧಕ ಶಕ್ತಿ ಕಡಿಮೆಯಾಗಿ ಪದೇ ಪದೇ ಸೋಂಕು ರೋಗಗಳಿಗೆ ತುತ್ತಾಗುತ್ತಾರೆ. ಗಾಯಗಳು ವಾಸಿಯಾಗಲು ತಡವಾಗುತ್ತದೆ.




ಡಯಾಬಿಟೀಸ್ ತೊಂದರೆ ಒಬ್ಬರಿಂದ ಒಬ್ಬರಿಗೆ ಹರಡುವ ಸಾಂಕ್ರಾಮಿಕ ಅಥವಾ ಅಂಟು ರೋಗವಲ್ಲ.

* ಸೌಜನ್ಯ ಕ್ಲಿನಿಕ್, # 393ಎಚ್,2ನೇ ಕ್ರಾಸ್, 9-ಎಫ್ ಮುಖ್ಯರಸ್ತೆ, ಹೊಸಹಳ್ಳಿ, ವಿಜಯನಗರ, ಬೆಂಗಳೂರು-560 040. ಮೊ: 94491 44308





**ಡಯಾಬಿಟೀಸ್ ತೊಂದರೆ-ಯಾರಲ್ಲಿ ಹೆಚ್ಚು ?**

ಮಧ್ಯಮ ವಯಸ್ಸಿನಲ್ಲಿ ಅಥವಾ ತಡವಾಗಿ ಗುರುತಿಸಲ್ಪಡುವ ರೋಗಿಗಳಲ್ಲಿ ಅನುವಂಶೀಯತೆ ಪ್ರಮುಖ ಪಾತ್ರವಹಿಸುತ್ತದೆ. ತಂದೆ ತಾಯಿಯರಲ್ಲಿ ಡಯಾಬಿಟೀಸ್ ರೋಗ ಕಂಡು ಬಂದಿದ್ದು, ಜತೆಗೆ ಬೊಜ್ಜು ಹೆಚ್ಚಾಗಿರುವವರು ಇವರಲ್ಲಿ ಡಯಾಬಿಟೀಸ್ ತೊಂದರೆ ಹೆಚ್ಚಾಗಿ ಕಂಡುಬರುತ್ತದೆ. ಹೆಚ್ಚು ಒತ್ತಡ, ಸಂಕಷ್ಟ ಅಪಘಾತ, ಹೆಚ್ಚು ತೂಕವುಳ್ಳ ಮಕ್ಕಳಿಗೆ ಜನ್ಮ ನೀಡುತ್ತಿರುವ ತಾಯಂದಿರಲ್ಲಿ ಮತ್ತು ಪದೇ ಪದೇ ವಿವಿಧ ರೋಗಗಳಿಗೆ ತುತ್ತಾಗುತ್ತಿರುವವರಲ್ಲಿ ಡಯಾಬಿಟೀಸ್ ರೋಗ ಹೆಚ್ಚಾಗಿ ಕಂಡುಬರುತ್ತದೆ.

**ವಿವಿಧ ಬಗೆಯ ಡಯಾಬಿಟೀಸ್ ರೋಗಗಳು**

೧. ಇನ್ಸುಲಿನ್ ಆಶ್ರಿತರು
೨. ಇನ್ಸುಲಿನ್ ಆಶ್ರಿತರಲ್ಲದವರು
೩. ಗರ್ಭಿಣಿ ಸಮಯದಲ್ಲಿ ಡಯಾಬಿಟೀಸ್ ರೋಗ ಗುರುತಿಸಲ್ಪಟ್ಟವರು
೪. ಅಪೌಷ್ಟಿಕತೆಯಿಂದ ಡಯಾಬಿಟೀಸ್ ಉಂಟಾಗಿರುವುದು

೧. **ಇನ್ಸುಲಿನ್ ಆಶ್ರಿತರು** - ಸಾಮಾನ್ಯವಾಗಿ ೨೦ ವರ್ಷ ವಯಸ್ಸಿಗೆ ಮೊದಲು ಗುರುತಿಸಲ್ಪಟ್ಟು ಜೀವನ ಪೂರ್ತಿ ಇನ್ಸುಲಿನ್ ಅವಲಂಬಿಸುವವರು. ಇನ್ಸುಲಿನ್ ದೊರೆಯದಿದ್ದಲ್ಲಿ ಪ್ರಾಣಾಪಾಯ ಸಂಭವಿಸುವುದುಂಟು.

೨. **ಇನ್ಸುಲಿನ್ ಆಶ್ರಿರತಲ್ಲದವರು** - ಈ ಬಗೆಯ ಡಯಾಬಿಟೀಸ್ ರೋಗಿಗಳು ನಮ್ಮ ದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಸಾಮಾನ್ಯವಾಗಿ ೩೦ ವರ್ಷ ವಯಸ್ಸಿಗೆ ಮೇಲ್ಪಟ್ಟವರಲ್ಲಿ ಇದು ಕಂಡುಬರುತ್ತದೆ. ದೇಹದ ತೂಕ ಹೆಚ್ಚಾಗಿದ್ದು ಇನ್ಸುಲಿನ್ ಕಡಿಮೆ ಅಥವಾ ಇನ್ಸುಲಿನ್ ಸರಿಯಾಗಿ ಕೆಲಸ ನಿರ್ವಹಿಸುವುದಿಲ್ಲ. ನಿಯಮಿತ ಆಹಾರ, ವ್ಯಾಯಾಮ, ಮಾತ್ರೆಗಳು ಮತ್ತು ಕೆಲವೊಮ್ಮೆ ಇನ್ಸುಲಿನ್ ಇವುಗಳಿಂದ ತೊಂದರೆಯನ್ನು ಹತೋಟಿಯಲ್ಲಿಟ್ಟು ಕೊಳ್ಳಬಹುದು.

**ಡಯಾಬಿಟೀಸ್ ರೋಗವನ್ನು ಗುಣಪಡಿಸಬಹುದೆ ?**

ಇಲ್ಲ ಗುಣಪಡಿಸಲು ಸಾಧ್ಯವಿಲ್ಲದಿದ್ದರೂ, ರೋಗವನ್ನು ಹತೋಟಿಯಲ್ಲಿಟ್ಟುಕೊಂಡು ರೋಗಿ ಸಂಪೂರ್ಣ ತೃಪ್ತಿಕರ ಜೀವನ ನಡೆಸಬಹುದು.

**ಡಯಾಬಿಟೀಸ್ ರೋಗವನ್ನು ಪತ್ತೆ ಹಚ್ಚುವುದು ಹೇಗೆ ?**

ಕೇವಲ ಮೂತ್ರ ಪರೀಕ್ಷೆಯಿಂದ ಡಯಾಬಿಟೀಸ್ ರೋಗವನ್ನು ಪತ್ತೆ ಹೆಚ್ಚುವುದು ಸಾಧ್ಯವಿಲ್ಲ.

ರಕ್ತಪರೀಕ್ಷೆ :- ಆಹಾರಕ್ಕೆ ಮೊದಲು ಮತ್ತು ಆಹಾರ ಅಥವಾ ಗ್ಲೂಕೋಸ್ ನಂತರ, ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷಿಸಿ ಡಯಾಬಿಟೀಸ್ ರೋಗಿಗಳನ್ನು ಗುರುತಿಸುತ್ತಾರೆ.

**ಡಯಾಬಿಟೀಸ್ ರೋಗದಿಂದ ಉಂಟಾಗುವ ದುಷ್ಪರಿಣಾಮಗಳು ?**

ಕಣ್ಣು, ರಕ್ತನಾಳ, ಹೃದಯ, ಮೂತ್ರಪಿಂಡ, ನರಮಂಡಲ ಇತ್ಯಾದಿ ದೇಹದ ವಿವಿಧ ಅಂಗಾಂಗಗಳ ಮೇಲೆ ಡಯಾಬಿಟೀಸ್ ರೋಗದಿಂದ ದುಷ್ಪರಿಣಾಮಗಳು ಉಂಟಾಗಬಹುದು.

**ಡಯಾಬಿಟೀಸ್ ತೊಂದರೆ ಹತೋಟಿ ಹೇಗೆ ?**

ಮಿತವಾದ ಆಹಾರ ಸೇವನೆ, ವ್ಯಾಯಾಮ, ಮಾತ್ರೆಗಳು, ಇನ್ಸುಲಿನ್-ಇಂಜಕ್ಷನ್ ಇವುಗಳಿಂದ ಡಯಾಬಿಟೀಸ್ ತೊಂದರೆಯನ್ನು ಹತೋಟಿಯಲ್ಲಿಟ್ಟು ಕೊಳ್ಳಬಹುದು.

**ಅತ್ಯುತ್ತಮ ರಕ್ತದ ಸಕ್ಕರೆ ಪ್ರಮಾಣ** : ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ೮೦ ರಿಂದ ೧೨೦ ಮಿ.ಗ್ರಾಂ., ಆಹಾರ ಸೇವಿಸಿ ೨ ಘಂಟೆಯ ನಂತರ ೧೨೦ ರಿಂದ ೧೮೦ ಮಿ.ಗ್ರಾಂ. ಇರಬೇಕು.

**ಆಹಾರದ ಬಗ್ಗೆ ತಪ್ಪು ಕಲ್ಪನೆ** : ಡಯಾಬಿಟೀಸ್ ತೊಂದರೆ ಇರುವವರು ಅನ್ನ, ಆಲೂಗಡ್ಡೆ, ಪಿಷ್ಟ ಪದಾರ್ಥಗಳನ್ನು ಸೇವಿಸಬಾರದೆಂಬ ತಪ್ಪು ಕಲ್ಪನೆ ಇದೆ. ಆದರೆ ಸಕ್ಕರೆ, ಬೆಲ್ಲ ಹಾಗೂ ಜೇನುತುಪ್ಪ ಇವುಗಳನ್ನು ಸೇವಿಸಬಾರದು.







ಆಹಾರದಲ್ಲಿ ಶರ್ಕರಪಿಷ್ಟ, ನಾರಿನ ಅಂಶ ಹೆಚ್ಚಾಗಿರಬೇಕು. (ಅಂದರೆ ಸೊಪ್ಪು ಹಸಿರು ತರಕಾರಿಗಳು) ಕೊಬ್ಬಿನ ಅಂಶ ಕಡಿಮೆ ಇರಬೇಕು. ಒಂದೇ ಸಲ ಹೆಚ್ಚು ಆಹಾರ ಸೇವಿಸುವ ಬದಲು ೩-೪ ಗಂಟೆಗಳಿಗೊಮ್ಮೆ ಸ್ವಲ್ಪ ಆಹಾರ ಸೇವಿಸುವುದು ಒಳ್ಳೆಯದು.

ಡಯಾಬಿಟೀಸ್ ರೋಗಿಗಳು ಉಪವಾಸ ಮಾಡುವುದರಿಂದ ಅನುಕೂಲಕ್ಕಿಂತ ಹೆಚ್ಚಾಗಿ ತೊಂದರೆ ಉಂಟಾಗಬಹುದು.

ಬೆಳಿಗ್ಗೆ, ಸಂಜೆ ಬಿರುಸಿನ ನಡಿಗೆ, ಇದು ಉತ್ತಮ ವ್ಯಾಯಾಮ.

ಡಯೋನಿಲ್, ಯೂಗ್ಲೋಕೋನ್ ಮುಂತಾದ ದಪ್ಪ ಮಾತ್ರೆಗಳನ್ನು ಆಹಾರಕ್ಕೆ ಮೊದಲು ತೆಗೆದುಕೊಳ್ಳಬೇಕು. ಒಬಿಮೆಟ್, ಗ್ಲೈಕೋಮೆಟ್ ಮುಂತಾದ ದಪ್ಪ ಮಾತ್ರೆಗಳನ್ನು ಆಹಾರದ ನಂತರ ತೆಗೆದುಕೊಳ್ಳಬೇಕು.

ರಕ್ತದಲ್ಲಿ ಸಕ್ಕರೆ ಪ್ರಮಾಣ ಕಡಿಮೆಯಾದಲ್ಲಿ ಹೊಟ್ಟೆ ಹಸಿವು, ಸುಸ್ತು, ಸಂಕಟ, ಬೆವರುವುದು, ತಲೆನೋವು, ಕಣ್ಣು ಕತ್ತಲಾಗುವುದು, ಮಂಪರು, ಜ್ಞಾನ ತಪ್ಪುವುದು ಮುಂತಾದ ತೊಂದರೆಗಳುಂಟಾಗುತ್ತದೆ. ಈ ರೀತಿಯ ಅನುಭವ ಉಂಟಾದರೆ ಪ್ರಾರಂಭದಲ್ಲೇ ಸಕ್ಕರೆ, ಹಣ್ಣಿನ ರಸ ಇತ್ಯಾದಿ ಸೇವಿಸಿದರೆ ತೊಂದರೆಯ ನಿವಾರಣೆ ಕೂಡಲೇ ಉಂಟಾಗುತ್ತದೆ.

ಎಲ್ಲ ಡಯಾಬಿಟೀಸ್ ರೋಗಿಗಳಿಗೂ ಚಿಕಿತ್ಸೆ ಒಂದೇ ಆಗಿರುವುದಿಲ್ಲ. ರೋಗಿಗಳು, ಬಂಧು-ಮಿತ್ರರ ಸಲಹೆಗೆ ಕಿವಿಗೊಡದೆ ವೈದ್ಯರ ಸಲಹೆ ಪಡೆಯಿರಿ. ಸಣ್ಣಪುಟ್ಟ ಗಾಯಗಳಾದರೆ ಉದಾಸೀನ ಮಾಡದೆ ಕೂಡಲೇ ವೈದ್ಯರ ಸಲಹೆ ಪಡೆಯಿರಿ.

ಡಯಾಬಿಟೀಸ್ ರೋಗಿಗಳಿಗೆ ಮೊದಲ ಆರು ವರ್ಷಗಳಲ್ಲಿ ರಕ್ತದಲ್ಲಿನ ಸಕ್ಕರೆ ಅಂಶ ಹೆಚ್ಚದಂತೆ ಎಚ್ಚರಿಕೆ ವಹಿಸುವುದು ಒಳ್ಳೆಯದು. ಇಲ್ಲದಿದ್ದರೆ ಉಂಟಾಗುವ ತೊಂದರೆಗಳನ್ನು ನಿಯಂತ್ರಿಸಲು ಕಷ್ಟವಾಗುತ್ತದೆ.

ಕಾಲು, ಪಾದಗಳನ್ನು ಎಚ್ಚರಿಕೆಯಿಂದ ಶುಭ್ರವಾಗಿ ಇಟ್ಟುಕೊಳ್ಳಬೇಕು. ಸೋಂಕು ಉಂಟಾದರೆ ನಂತರ ಕಾಲಿನ ಭಾಗಗಳು ಕೊಳೆತು ಹೋಗುವ ಸಂಭವ ಸಹ ಉಂಟು.



ತಿಂಗಳಿಗೊಮ್ಮೆ ರಕ್ತದಲ್ಲಿರುವ ಸಕ್ಕರೆ ಅಂಶ ಪರೀಕ್ಷೆ. ಮೂರು ತಿಂಗಳಿಗೊಮ್ಮೆ ರಕ್ತದಲ್ಲಿನ ಕೊಬ್ಬಿನ ಅಂಶ (Lipid Profile) ಪರೀಕ್ಷೆ. ವರ್ಷಕೊಮ್ಮೆ ಕಣ್ಣಿನ ಪರೀಕ್ಷೆ, ದಂತ ವೈದ್ಯರ ಸಲಹೆ ಪಡೆಯಿರಿ.

ಮೂರು ತಿಂಗಳಿಗೊಮ್ಮೆ ಗ್ಲೈಕೋಸೈಲೇಟಿಡ್ ಹೀಮೋಗ್ಲೋಬಿನ್ ಪರೀಕ್ಷೆ ಮಾಡಿಸಿದರೆ, ಮೂರು ತಿಂಗಳ ಅವಧಿಯಲ್ಲಿ ರಕ್ತದಲ್ಲಿನ ಸಕ್ಕರೆ ಪ್ರಮಾಣ ನಿಯಮಿತವಾಗಿರುವುದರ ಬಗ್ಗೆ ತಿಳಿಯುತ್ತದೆ. ಈ ಪರೀಕ್ಷೆಯ ಸೌಲಭ್ಯ ಬೆಂಗಳೂರಿನ ಕೆಲವು ಪ್ರಯೋಗ ಶಾಲೆಯಲ್ಲಿ ಲಭ್ಯವಿದೆ.

ಮೈಕ್ರೋ ಆಲ್ಬೂಮಿನ್ಯೂರಿಯ ಪರೀಕ್ಷೆಯಿಂದ ರೋಗಿಗಳಲ್ಲಿ ಮೂತ್ರಪಿಂಡಕ್ಕೆ ಆಗಿರುವ ಹಾನಿಯನ್ನು ಬಹಳ ಮುಂಚಿತವಾಗಿ ಗುರುತಿಸಬಹುದು. ಈ ಪರೀಕ್ಷೆಯ ಸೌಲಭ್ಯ ಬೆಂಗಳೂರಿನ ಕೆಲವು ಪ್ರಯೋಗ ಶಾಲೆಯಲ್ಲಿ ಲಭ್ಯವಿದೆ.

ಧೂಮಪಾನದಿಂದ ರಕ್ತನಾಳಗಳಿಗೆ ಉಂಟಾಗುವ ಹಾನಿ ಡಯಾಬಿಟೀಸ್ ರೋಗಿಗಳಲ್ಲಿ ತೀವ್ರಗತಿಯಲ್ಲಿ ಮುಂದುವರೆಯುತ್ತದೆ. ಆದ್ದರಿಂದ ಧೂಮಪಾನ ಮಾಡಬಾರದು.

ಪ್ರಾರಂಭದಿಂದಲೇ ಡಯಾಬಿಟೀಸ್ ತೊಂದರೆಯನ್ನು ಗುರುತಿಸಿ ಸರಿಯಾದ ಚಿಕಿತ್ಸೆ ನಿಯಮಿತವಾದ ಆಹಾರ, ವ್ಯಾಯಾಮ ವೈದ್ಯಕೀಯ ಸಲಹೆ, ಇವುಗಳಿಂದ ಡಯಾಬಿಟೀಸ್ ತೊಂದರೆಯನ್ನು ಪರಿಣಾಮಕಾರಿಯಾಗಿ ಹತೋಟಿಯಲ್ಲಿಟ್ಟುಕೊಂಡರೆ, ಪೂರ್ಣ ಹಾಗೂ ತೃಪ್ತಿಕರ ಜೀವನವನ್ನು ನಡೆಸಲು ಸಾಧ್ಯ.

ವರದಿ

# ಭಾರತದ ಪರಂಪರೆ ಹಾಗೂ ಬಸವಾದಿ ಶರಣರ ಪರಂಪರೆಗಳು ಒಂದೇ ನಾಣ್ಯದ ಎರಡು ಮುಖಗಳು

– ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು

ಡಿಸೆಂಬರ್ ೧೦ ರಂದು ಹಾಸನ ಜಿಲ್ಲೆ ಹಳ್ಳಿಮೈಸೂರು ಹೋಬಳಿ ತೇಜೂರು ಸಿದ್ಧರಾಮೇಶ್ವರ ಮಠದಲ್ಲಿ ಏರ್ಪಡಿಸಿದ್ದ ಲಿಂ. ಕೆ.ಎಸ್. ಮರಿದೇವರು ಮತ್ತು ಮಹದೇವಮ್ಮ ಅವರ ಪುಣ್ಯಾರಾಧನೆ ಸಮಾರಂಭದಲ್ಲಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ನುಡಿ ಸಂದೇಶದಲ್ಲಿ "ಪ್ರತಿಯೊಬ್ಬ ವ್ಯಕ್ತಿಗೂ ಹಿರಿಯರ ಮಾರ್ಗದರ್ಶನ ಬೇಕು. ಧರ್ಮ, ಸಂಸ್ಕೃತಿ ಪರಾಮರ್ಶಿಸುವಾಗ ಸತತ ಅಧ್ಯಯನಶೀಲತೆ, ಆಳವಾದ ನೋಟ, ಪಾರದರ್ಶಕ ನಿಲುವುಗಳಿರಬೇಕಾಗುತ್ತದೆ. ನಮ್ಮ ಭಾರತದ ಪರಂಪರೆ ಹಾಗೂ ಬಸವಾದಿ ಶರಣರ ಪರಂಪರೆ, ಮೌಲ್ಯಗಳು ಒಂದೇ ನಾಣ್ಯದ ಎರಡು ಮುಖಗಳು. ಶರಣರ ಅನುಭಾವ ಸಾಹಿತ್ಯ. ಅಲ್ಲಿ ನಾಸ್ತಿಕವಾದದ ಜತೆಗೆ ಮೂಢನಂಬಿಕೆಗಳ ವಿಡಂಬನೆಯೂ ಇದೆ. ಭಾರತದಲ್ಲಿ ಆಯಾ ಭಾಗದ ಸಂತರು, ದಾರ್ಶನಿಕರು, ಅನುಭಾವಿಗಳು ತಮ್ಮ ತಮ್ಮ ಧರ್ಮದಲ್ಲಿಕೊಂಡೇ ಅನುಭಾವ ಸಾಹಿತ್ಯವನ್ನು ರಚಿಸಿ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗಿದರು. ಅವರು ಮೂಡಿಸಿದ ಹೆಜ್ಜೆ ಗುರುತುಗಳು ನಮಗೆ ದಾರಿದೀಪವಾಗಿದೆ. ವ್ಯಕ್ತಿ ತನ್ನ ಅರಿವಿನ ದಿಗಂತವನ್ನು ವಿಸ್ತರಿಸಿಕೊಂಡಷ್ಟು ಪರಿಪಕ್ವವಾಗುತ್ತಾನೆ. ಅಂತಹ ಬದುಕು ನಮ್ಮದಾಗಬೇಕು' ಎಂದು ಹೇಳಿದರು.

ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ "ಸಕಲ ಜೀವಾತ್ಮಗಳಿಗೂ ಲೇಸನ್ನು ಬಯಸುವ ಮೂಲಕ ಸಮಾಜದಲ್ಲಿ ಸುಖ ಶಾಂತಿ ನೆಮ್ಮದಿಯಿಂದ ಉತ್ತಮ ವಾತಾವರಣದಲ್ಲಿ ಬಾಳಬೇಕು. ನಮ್ಮಲ್ಲಿ ಹಿಂದೂ ಸಂಸ್ಕೃತಿ ಉಳಿಯಬೇಕಾದರೆ ಇಂತಹ ಸನಾತನ ಧರ್ಮ, ಪೂಜಾ ಕಾರ್ಯಕ್ರಮಗಳಿಂದ ಮಾತ್ರ ಸಾಧ್ಯ" ಎಂದು ಹೇಳಿದರು.

ಚಾಮರಾಜನಗರ ಜಿಲ್ಲೆ ಹರವೆ ವಿರಕ್ತಾಶ್ರಮದ ಪೂಜ್ಯ ಶ್ರೀ ಶ್ರೀ ಸರ್ಪಭೂಷಣ ಸ್ವಾಮೀಜಿಯವರು ತಮ್ಮ ಆಶೀರ್ವಚನದಲ್ಲಿ "ಇಂದಿನ ಪ್ರತಿಯೊಬ್ಬ ಮಾನವನ ಬದುಕಿನ ಬದಲಾವಣೆಗೆ ಶಿಕ್ಷಣದಿಂದ ಮಾತ್ರ ಸಾಧ್ಯ ಎಂಬುದನ್ನು ಮನಗೊಂಡಿದ್ದು ಶ್ರೀ ಸಿದ್ಧಗಂಗಾ ಕ್ಷೇತ್ರದ ತ್ರಿವಿಧ ದಾಸೋಹಿ, ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಉಚಿತ ಶಿಕ್ಷಣ ನೀಡುವುದರ ಮೂಲಕ ಬಡವಿದ್ಯಾರ್ಥಿಗಳ ಬಾಳಿಗೆ ಬೆಳಕಾದರು. ಈ ಎರಡು ಮಠಗಳು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ, ಸಲ್ಲಿಸುತ್ತಿರುವ ಸೇವೆ ಅಮೂಲ್ಯವಾದುದು" ಎಂದು ಹೇಳಿದರು.

ಸಮಾರಂಭದಲ್ಲಿ ಉಪಸ್ಥಿತರಿದ್ದ ತೇಜೂರು ಶ್ರೀಮಠದ ಪೂಜ್ಯ ಶ್ರೀ ಶ್ರೀ ಕಿರಿಕೊಡ್ಲಿಮಠದ ಶ್ರೀಗಳು, ಕೆಸವತ್ತೂರು ಮಠದ ಶ್ರೀಗಳು, ಬೇವೂರು ಮಠದ ಶ್ರೀಗಳು, ಶಿರಮಳ್ಳಮಠದ ಶ್ರೀಗಳು, ಅರಕೆರೆ ಮಠದ ಶ್ರೀಗಳು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು.



ಕ್ಷೇತ್ರವಾರ್ತೆ

# ದೇಶದ ಕಟ್ಟಕಡೆಯ ವ್ಯಕ್ತಿಗೂ ಅಂಚೆ ಇಲಾಖೆಯಿಂದ ಸೇವೆ

ಶ್ರೀ ಸಿದ್ಧಗಂಗಾ ಮಠದಲ್ಲಿ ಜನವರಿ ೨ ರಂದು ಏರ್ಪಡಿಸಿದ್ದ ನ್ಯಾಷನಲ್ ಅಸೋಸಿಯೇಷನ್ ಆಫ್ ಪೋಸ್ಟಲ್ ಎಂಪ್ಲಾಯೀಸ್ ಗ್ರೂಫ್ 'ಸಿ' ನ್ಯಾಷನಲ್ ಯೂನಿಯನ್ ಆಫ್ ಎಂಪ್ಲಾಯೀಸ್ ಪೋಸ್ಟ್‌ಮನ್ ಅಂಡ್ ಎಂಟಿಎಸ್, ನ್ಯಾಷನಲ್ ಯೂನಿಯನ್ ಆಫ್ ಗ್ರಾಮೀಣ್ ಡಕ್ ಸೇವಕ್ ಕರ್ನಾಟಕ ವೃತ್ತದ ವತಿಯಿಂದ ೨೫ನೇ ಜಂಟಿ ಸರ್ಕಲ್ ಸಮಾವೇಶವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿ ತಮ್ಮ ನುಡಿ ಸಂದೇಶದಲ್ಲಿ "ರೈಲ್ವೆ ಮತ್ತು ಅಂಚೆ ಇಲಾಖೆ ಭಾರತದ ಜೀವಾಳ. ಜವಾಬ್ದಾರಿ ಮತ್ತು ನಂಬಿಕೆಯನ್ನು ಅಂಚೆ ಇಲಾಖೆ ಇಂದಿಗೂ ಉಳಿಸಿಕೊಂಡು ಬಂದಿದೆ. ದೇಶದ ಕಟ್ಟಕಡೆಯ ವ್ಯಕ್ತಿಗೆ ಸೇವೆಯನ್ನು ಒದಗಿಸುವ ಅವಕಾಶ ಇರುವುದು ಅಂಚೆ ಇಲಾಖೆಗೆ ಮಾತ್ರ. ಬ್ರಿಟಿಷರು ದೇಶ ಬಿಟ್ಟು ಹೋದ ನಂತರವೂ ದೇಶದ ಅಗತ್ಯತೆ ಪೂರೈಸುತ್ತಿರುವ ಅಂಚೆ ಇಲಾಖೆಯ ಸೇವೆ ಸ್ಮರಣೀಯವಾದುದು" ಎಂದು ಹೇಳಿದರು.

'ಕೋವಿಡ್ ಸಂದರ್ಭದಲ್ಲಿ ಪ್ರಾಣ ಲೆಕ್ಕಿಸದೇ ಸೇವೆಯನ್ನು ಸಲ್ಲಿಸಿದ ಕೀರ್ತಿ ಅಂಚೆ ಇಲಾಖೆಗೆ ಸಲ್ಲುತ್ತದೆ. ಅಂಚೆ ಇಲಾಖೆಯಲ್ಲಿ ದೊಡ್ಡ ಸಂಘಟನೆ ಇದೆ. ತಮ್ಮ ಸಮಸ್ಯೆಗಳನ್ನು ಚರ್ಚಿಸಿ ಮೇಲಿನ ಅಧಿಕಾರಿಗಳಿಗೆ ತಲುಪಿಸಲಿ. ಉನ್ನತ ಅಧಿಕಾರಿಗಳು ಸಂಘಟನೆಯ ಹಿತಕಾಯುವಂತಾಗಲಿ. ಕೇಂದ್ರ ಸರ್ಕಾರ ಅಂಚೆ ಇಲಾಖೆ ಬೆನ್ನಿಗೆ ನಿಂತಿದ್ದು ಇಲಾಖೆ ಉತ್ತಮವಾಗಿ ಕಾರ್ಯನಿರ್ವಹಿಸಿ ದೇಶಕ್ಕೆ ಹೆಸರು ತರಲಿ" ಎಂದು ಹಾರೈಸಿದರು.

ಕಾರ್ಯಕ್ರಮದಲ್ಲಿ ಸಿಪಿಎಂಜಿ ಶ್ರೀಮತಿ ಶಾರದಾ ಸಂಪತ್, ಎಫ್.ಎನ್.ಪಿ.ಜಿ. ನಿವೃತ್ತ ಕಾರ್ಯದರ್ಶಿ ಡಿ. ತ್ಯಾಗರಾಜನ್, ಶ್ರೀ ಮಂಜುನಾಥ್, ಶ್ರೀ ಮೋಹನ್‌ಕುಮಾರ್, ಶ್ರೀ ಕಟ್ಟಿಮನಿ, ಶ್ರೀ ಆರ್. ಸುಧಾಕರ ಮೊದಲಾದ ಗಣ್ಯರು ಉಪಸ್ಥಿತರಿದ್ದರು.





ಕ್ಷೇತ್ರವಾರ್ತೆ

# ಸೂರ್ಯ ನಮಸ್ಕಾರದಿಂದ ಆರೋಗ್ಯ ವೃದ್ಧಿ

– ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು



ದೇಶದ ೭೫ನೇ ಸ್ವಾತಂತ್ರ್ಯೋತ್ಸವದ ಅಂಗವಾಗಿ ಭಾರತ ಸರ್ಕಾರದ ಸ್ಪೋರ್ಟ್ಸ್ ಅಥಾರಟಿ ಆಫ್ ಇಂಡಿಯಾ ಹಾಗೂ ರಾಷ್ಟ್ರೀಯ ಯೋಗಾಸನ ಕ್ರೀಡಾ ಸಂಸ್ಥೆ ಸಂಯುಕ್ತವಾಗಿ ಹಮ್ಮಿಕೊಂಡಿರುವ ವಿಶ್ವದಾಖಲೆಯ ೭೫ ಕೋಟಿ ಸೂರ್ಯ ನಮಸ್ಕಾರ ಕಾರ್ಯಾಗಾರಕ್ಕೆ ಶ್ರೀ ಸಿದ್ಧಗಂಗಾ ಮಠದಲ್ಲಿ ಜನವರಿ ೧ ರಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಚಾಲನೆ ನೀಡಿ "ಸೂರ್ಯ ನಮಸ್ಕಾರ ಕ್ರಮಬದ್ಧವಾಗಿ ಮಾಡಿದರೆ ಇತರೆ ಯಾವ ಆಸನಗಳೂ ಬೇಡ. ಮಾನಸಿಕ ಹಾಗೂ ದೈಹಿಕ ಆರೋಗ್ಯ ಕಾಪಾಡಿಕೊಳ್ಳಲು ಯೋಗ ಮಹತ್ವದ ಸಾಧನ. ಇಡೀ ವಿಶ್ವಕ್ಕೆ ಕೊಡುಗೆ ನೀಡಿದ ದೇಶ ನಮ್ಮದು. ಯೋಗದ ಮಹತ್ವವನ್ನು ಅರ್ಥಮಾಡಿಕೊಂಡು ಇತರ ದೇಶಗಳೂ ಭಾರತದ ಯೋಗ ಪದ್ಧತಿಯನ್ನು ಅಳವಡಿಸಿಕೊಳ್ಳಲು ಮುಂದಾಗಿದೆ. ಬಾಲ್ಯದಿಂದಲೂ ಯೋಗಾಭ್ಯಾಸ ಮಾಡಿದರೆ ಮಾನಸಿಕ ಆರೋಗ್ಯದ ಜೊತೆಗೆ ದೈಹಿಕವಾಗಿ ಸದೃಢತೆ ಉಂಟಾಗುತ್ತದೆ" ಎಂದು ಹೇಳಿದರು.

ಪೂಜ್ಯ ಶ್ರೀ ಶ್ರೀಗಳು ತಮ್ಮ ನುಡಿ ಸಂದೇಶದಲ್ಲಿ "ಸೂರ್ಯ ನಮಸ್ಕಾರದಲ್ಲಿ ೧೨ ಆಸನಗಳಿದ್ದು, ಒಂದೊಂದು ಆಸನವೂ ಮನುಷ್ಯನ ಆರೋಗ್ಯಕ್ಕೆ ಪೂರಕವಾಗಿದೆ. ಧ್ಯಾನ, ಪ್ರಾಣಾಯಾಮ ವ್ಯಕ್ತಿಯ ಉಸಿರಾಟವನ್ನು ಸರಾಗಗೊಳಿಸುತ್ತದೆ. ಜೀವನಪೂರ್ತಿ ಆರೋಗ್ಯವಂತರಾಗಿ ನೆಮ್ಮದಿಯ ಜೀವನ ನಡೆಸಬೇಕಾದರೆ ಶಿಸ್ತುಬದ್ಧ ಜೀವನ ಅದಕ್ಕೆ ಪೂರಕವಾದ ಯೋಗಾಭ್ಯಾಸ ಅತ್ಯವಶ್ಯಕ. ಉತ್ತಮ ಆರೋಗ್ಯಕ್ಕೆ ಯೋಗ ಸಂಜೀವಿನಿ ಇದ್ದಂತೆ. ಪ್ರತಿದಿನವನ್ನು ಹೊಸತನವೆಂದು







ವಿದ್ಯಾರ್ಥಿಗಳಿಂದ ಸಾಮೂಹಿಕ ಸೂರ್ಯ ನಮಸ್ಕಾರ

ಭಾವಿಸಬೇಕು. ಸಮಾಜಕ್ಕೆ ಒಳ್ಳೆ ಕೆಲಸ ಮಾಡುವುದರೊಂದಿಗೆ ಸಾಧನೆ ಮಾಡಬೇಕಾಗಿದೆ. ಅಶಕ್ತರಿಗೆ ಸಹಾಯ ಮಾಡುವುದರ ಮೂಲಕ ಹೊಸ ವರ್ಷದ ಹೊಸ್ತಿಲಿನಲ್ಲಿ ಶುಭ ಸಂದೇಶ ನೀಡಿದರು. ಜೀವನ ಸುಖ-ದುಃಖಗಳ ಮಹಾಸಂಗಮ. ಯಾವುದು ಸ್ಥಿರವಲ್ಲ. ಸುಖ ದುಃಖಗಳನ್ನು ಬೇವು ಬೆಲ್ಲದಂತೆ ಸಮಚಿತ್ತದಿಂದ ಸ್ವೀಕಾರ ಮಾಡುವ ವ್ಯವಸ್ಥೆಯನ್ನು ರೂಢಿಸಿಕೊಳ್ಳಬೇಕು" ಎಂದು ಕರೆ ನೀಡಿದರು.

"ಜೀವನದಲ್ಲಿ ಆರೋಗ್ಯ ಬಹುಮುಖ್ಯವಾದುದು. ಆರೋಗ್ಯವನ್ನು ಕಾಪಾಡಿಕೊಳ್ಳುವ ನಿಟ್ಟಿನಲ್ಲಿ ಎಲ್ಲರೂ ಗಮನಹರಿಸಬೇಕಿದೆ. ಕಳೆದ ೨ ವರ್ಷಗಳಿಂದ ಕೊರೋನಾದಿಂದ ಇಡೀ ವಿಶ್ವವೇ ತತ್ತರಿಸಿ ಹೋಗಿದೆ. ಈಗಾಗಲೇ ೩ನೇ ಅಲೆ 'ಓಮೈಕ್ರಾನ್' ದಾಳಿಯಿಡುತ್ತಿದೆ. ಪ್ರತಿಯೊಬ್ಬರೂ ತಜ್ಞ ವೈದ್ಯರ ಸಲಹೆಯಂತೆ ಮುನ್ನೆಚ್ಚರಿಕೆ ಕ್ರಮಗಳೊಂದಿಗೆ ಬದುಕು ನಡೆಸೋಣ" ಎಂದು ಹೇಳಿದರು.

ಈ ಕಾರ್ಯಾಗಾರದಲ್ಲಿ ೮ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಏಕಕಾಲದಲ್ಲಿ ಸೂರ್ಯ ನಮಸ್ಕಾರ ಮಾಡುವ ಮೂಲಕ ಗಮನ ಸೆಳೆದರು. ಈ ಕಾರ್ಯಾಗಾರದಲ್ಲಿ ಪತಂಜಲಿ ಯೋಗಾಪೀಠ, ಭಾರತ ಸ್ವಾಭಿಮಾನ ಟ್ರಸ್ಟ್, ಗೀತ ಪರಿವಾರ ಹಾಗೂ ಹಾರ್ಟ್ ಫಿಟ್‌ನೆಸ್ ಎಸ್‌ಜಿಎಸ್ ಅಂತರರಾಷ್ಟ್ರೀಯ ಯೋಗ ಪ್ರತಿಷ್ಠಾನ, ಕರ್ನಾಟಕ ಯೋಗಾಸನ ಕ್ರೀಡಾ ಸಂಸ್ಥೆ ಹಾಗೂ ಬೆಂಗಳೂರು ವಿಶ್ವವಿದ್ಯಾಲಯ ಸಹ ಯೋಗದಲ್ಲಿ ಈ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

ಕಾರ್ಯಾಗಾರದಲ್ಲಿ ಆಚಾರ್ಯ ಡಾ. ಎಂ. ನಿರಂಜನಮೂರ್ತಿ, ಮೈಸೂರಿನ ಶ್ರೀ ಶಿವಪ್ರಕಾಶ ಮೊದಲಾದವರು ಭಾಗವಹಿಸಿದ್ದರು.





## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 3371. | ಶ್ರೀ ಕಿರಣ್ ಪಾಟೀಲ್ ಬೆಂಗಳೂರು. | 3,000 |
| 3372. | ಶ್ರೀ ಶಮಿಹುಲ್ಲಾ ಹೊಳವನಹಳ್ಳಿ. | 20,000 |
| 3373. | ಶ್ರೀ ಎಂ. ನೀಲಮ್ಮ ಶ್ರೀಮಠ. | 5,001 |
| 3374. | ಶ್ರೀ ಹೆಚ್.ಆರ್. ನವೀನ್‌ಕುಮಾರ್ ಶ್ರೀಮಠ. | 5,001 |
| 3375. | ಶ್ರೀ ಆರ್. ರಂಗಪ್ಪ ಶ್ರೀಮಠ. | 5,001 |
| 3376. | ಶ್ರೀ ಜಿ.ಆರ್. ಸಿದ್ಧಲಿಂಗಸ್ವಾಮಿ ಶ್ರೀಮಠ. | 5,001 |
| 3377. | ಶ್ರೀ ಅಮರಗೋಪಾಲ ಶ್ರೀಮಠ. | 5,001 |
| 3378. | ಶ್ರೀಮತಿ ಎನ್. ತನುಜ ಶ್ರೀಮಠ. | 5,001 |
| 3379. | ಶ್ರೀ ಆರ್.ಎನ್. ಹರ್ಷಿತ್ ಶ್ರೀಮಠ. | 5,001 |
| 3380. | ಶ್ರೀಮತಿ ಕಮಲಮ್ಮ ಶ್ರೀಮಠ. | 5,001 |
| 3381. | ಶ್ರೀ ಶಿವಕುಮಾರಯ್ಯ ಬೆಂಗಳೂರು. | 3,000 |
| 3382. | ಶ್ರೀ ಜಿ. ಶಿವಪ್ರಸಾದ್ ಶ್ರೀಮಠ. | 5,001 |
| 3383. | ಶ್ರೀ ಜಿ. ಗುರುಬಸಪ್ಪ ಬೆಂಗಳೂರು. | 50,000 |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 3384. | ಶ್ರೀ ಎನ್.ಎಂ. ಮಹೇಶ್‌ಕುಮಾರ್ ಟಿ. ನರಸೀಪುರ. | 10,000 |
| 3385. | ಶ್ರೀ ವಿನಯ್ ಮೈಸೂರು. | 10,000 |
| 3386. | ಶ್ರೀ ಶ್ರೀನಿವಾಸ ಪಿ.ಡಿ. ಗಟ್ಟೀಪುರ. | 5,000 |
| 3387. | ಶ್ರೀ ಗಂಗರಾಜು ತುಮಕೂರು. | 5,001 |
| 3388. | ಶ್ರೀ ಎಸ್. ಮೋಹನ್‌ಕುಮಾರ್ ಎಂ.ಎನ್. ಕೋಟೆ. | 5,001 |
| 3389. | ಶ್ರೀ ಎಸ್. ಶಿವಲಿಂಗ ರುದ್ರಮೂರ್ತಿ ಶ್ರೀಮಠ. | 5,001 |
| 3390. | ಶ್ರೀಮತಿ ಗೌರಮ್ಮ ಬಸವರಾಜು ಬೆಂಗಳೂರು. | 500 |
| 3391. | ಶ್ರೀ ಶಶಿಧರ ಡಿ. ಶ್ರೀಮಠ. | 5,001 |
| 3392. | ಶ್ರೀ ವಿವೇಕ್ ಎ. ಶ್ರೀಮಠ. | 5,001 |
| 3393. | ಶ್ರೀ ಮಂಜುನಾಥ್ ಜಿ. ಶ್ರೀಮಠ. | 5,001 |
| 3394. | ಶ್ರೀ ಸುನಿಲ್ ಬಿ.ಎನ್. ಶ್ರೀಮಠ. | 5,001 |
| 3395. | ಶ್ರೀ ಬಿ.ಎಂ. ಲೋಕೇಶ್ ಸಿಂಗಟಗೆರೆ. | 5,001 |
| 3396. | ಶ್ರೀ ಪ್ರಕಾಶ್ ಚಿಕ್ಕಸಂದ್ರ. | 10,000 |

(ಮುಂದುವರಿಯುವುದು)

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232